*Kodandana Upanyasagalu Part II—Kannada*
*For Non-detailed Study.*

---

# ಕೋದಂಡನ ಉಪನ್ಯಾಸಗಳು

## (ದ್ವಿತೀಯ ಭಾಗ)

ಜಿ. ವಾಮನ ಭಟ್ಟ, ಬಿ. ಎ., ಎಲ್. ಟಿ.,
ಮಿತ್ರಮಂಡಳಿ, ಮಂಗಳೂರು

ಶ್ರೀಮಾನ್ ವಿನಾಯಕ ಕೃಷ್ಣ ಗೋಕಾಕ, ಎಮ್. ಎ.,
ಇವರ
ಮುನ್ನುಡಿಯೊಡನೆ



೧೯೪೭

ಬೆಲೆ ಒಂದೂಕಾಲು ರೂಪಾಯಿ

---

ಪ್ರಕಾಶಕರು:
ಬಾಳಿಗಾ ಎಂಡ್ ಸನ್ಸ್. ಮಂಗಳೂರು.

# ಅನುಕ್ರಮಣಿಕೆ

# ಮುನ್ನುಡಿ

'ಕೋದಂಡನ ಉಪನ್ಯಾಸಗಳು' ಇನ್ನೂ ಅಚ್ಚಿನಲ್ಲಿರುವಾಗ ಅದರ ಕೆಲವು ಬಿಡಿ ಪಾನುಗಳನ್ನು ದಿವಂಗತ ಪೇಜಾವರ ಸದಾಶಿವರಾಯರು ಇಟಲಿಯಿಂದ ಆ:ಕ್ಸಫರ್ಡಿಗೆ ಕಳಿಸಿಕೊಟ್ಟಿದ್ದರು. ಆಗಲೇ ನಾನು ಆ ಪಾನುಗಳನ್ನು ಓದಿ ಸಂತೋಷಪಟ್ಟಿದ್ದೆ. ಅವರ ವಿಡಂಬನೆಯಲ್ಲಿಯ ಸರಸ ಸಜ್ಜನಿಕೆಯು ನನ್ನ ಮನಸ್ಸನ್ನು ಹಿಡಿದಿತ್ತು. ಆ ಸಜ್ಜನಿಕೆಯ ಅನುಭವವನ್ನು ನೆನೆಸಿದಾಗ ಶೆಲ್ಲಿಯು ಪೇಕಾ:ಕ್ ಎಂಬ ತನ್ನ ವಿಡಂಬನಕಾರ—ಸ್ನೇಹಿತನನ್ನು ಕುರಿತು ಬರೆದ ಕೆಲವು ಸಾಲುಗಳು ನನಗೆ ನೆನಪಾದವು:

*"His fine wit*
*Makes such a wound, the knife is lost in it."*

ಮುಂದೆ 'ಉಪನ್ಯಾಸ'ಗಳನ್ನು ಇಡಿಯಾಗಿ ಓದಿದಾಗ ಇದೇ ಅನುಭವವೇ ನನ್ನಲ್ಲಿ ಇನ್ನಿಷ್ಟು ಸ್ಫುಟಗೊಂಡಿತು.

ಕೋದಂಡರ ಕೃತಿಗಳು ಇಂದಿನ ಕನ್ನಡ ಪ್ರಬಂಧಕ್ಕೆ ಒಂದು ವಿಶಿಷ್ಟ ಕಾಣಿಕೆಯೆಂದು ನಾನು ತಿಳಿದಿದ್ದೇನೆ. ಕನ್ನಡದ ನೆಲದಿಂದ ಒಗುಮಿಗುವದೇನೋ ಎಂಬಷ್ಟು ಸಹಜವಾದ ಮೃದು ಹಾಸ್ಯ ಶ್ರೀ ಗೋರೂರ ರಾಮಸ್ವಾಮಿಯುವರ ಕೆಲವು ಕೃತಿಗಳಲ್ಲಿಯಂತೆ ಇಲ್ಲಿಯೂ ಪ್ರಕಟವಾಗಿದೆ. ಪು. ತಿ. ಅವರ ಪ್ರಬಂಧಗಳಲ್ಲಿ ಕಂಡು ಬರುವ ಕಾವ್ಯಮಯ ಧ್ಯಾನ ಇಲ್ಲಿ ತನ್ನದೇ ಆದ ನಾವೀನ್ಯವನ್ನು ಪಡೆದು ಕಾಣಿಸಿಕೊಳ್ಳುತ್ತದೆ. ಆದರೆ ಶ್ರೀ ಗೋರೂರರು ವಿನೋದಮಯ ಪ್ರಬಂಧದಿಂದ ಬಹು ಸುಲಭವಾಗಿ ಕಾವ್ಯಂಬರಿಗಳ ರಾಜ್ಯವನ್ನು ಹೊಕ್ಕಿಬಿಡುತ್ತಾರೆ. ಪು. ತಿ. ಅವರ ಧ್ಯಾನದಲ್ಲಿ ಹೆಜ್ಜೆ ಹೆಜ್ಜೆಗೆ ಧರ್ಮ–ತತ್ವಗಳು ತಲೆ ಎತ್ತುತ್ತವೆ. ಆದರೆ ಕೋದಂಡರ ಕೃತಿಗಳಲ್ಲಿ ಕಥಾನಕವಿದ್ದರೂ ಅದು ಬರಿ ಕಟ್ಟು; ಒಳಗಿನ ಚಿತ್ರವೇ ಬೇರೆಯಾಗಿರುತ್ತದೆ. ಮಥನಾಂಥ್ಯದಲ್ಲಿ ಇಲ್ಲಿಯೂ ತತ್ವವು ದೊರೆಯುತ್ತದೆ; ದೊರೆಯಲೇಬೇಕು. ಆದರೆ ಸಾಮಾನ್ಯ ವಸ್ತು–ಸಂಗತಿ-ದೃಶ್ಯಗಳ ಅಸಾಮಾನ್ಯತೆಯನ್ನೂ ಚೆಲುವನ್ನೂ ತೋರಿಸುವದರಲ್ಲಿಯೇ ಇಲ್ಲಿಯ ಧ್ಯಾನದ ಸಾಫಲ್ಯವಿದೆ.

ಕೋದಂಡರು ಮಂಗಳೂರಿನ ಅನಭಿಷಿಕ್ತ ಕವಿ, ಮಂಗಳೂರಿನ ಚಾರಣ ಎಂದರೂ ಸಂದೀತು. ಗೊರೂರು ಮಲ್ಲಿಗೆ ಹಳ್ಳಿ ಮೊದಲಾದ ಹಳ್ಳಿಗಳು ಅನೇಕರಿಗೆ ಅವರ ಕೃತಿಗಳಿಂದಲೇ ಪರಿಚಯವಾಗಬೇಕು. ಪು.ತಿ.

ಯವರ ಯದುಗಿರಿಯೂ ಬಹುಮಟ್ಟಿಗೆ ಹಾಗೆಯೇ. ಆದರೆ ಮಂಗಳೂರಿನ ಹೆಸರನ್ನು ಎಲ್ಲರೂ ಕೇಳಿ ಬಲ್ಲರು, ಅದನ್ನು ಕಂಡು ಇಲ್ಲವೆ ತಿಳಿದು ಬಲ್ಲವರ ಸಂಖ್ಯೆ ಮಾತ್ರ ಕಡಿಮೆ. ಇಂಥವರು ಕೋದಂಡರ ಉಪನ್ಯಾಸಗಳನ್ನು ಓದಿದರೆ ಮಂಗಳೂರಿನ ಒಂದು ಸ್ವಪ್ನರೇಖಾ ಚಿತ್ರವನ್ನು ಅವರು ಸಹಜವಾಗಿ ಕಾಣುವರು. ಮಂಗಳೂರಿನ ಪ್ರೀತಿ, ಆದರೆ ವಾಸ್ತವಿಕ ಜ್ಞಾನ, ಮಂಗಳೂರಿನ ಕೊರತೆಗಳನ್ನು ಕುರಿತು ಸರಸ ಸಜ್ಜನಿಕೆಯುಳ್ಳ ವಿಡಂಬನ,- ಇವೆಲ್ಲ ಹೃದಯ ಸ್ಪರ್ಶಿಯಾಗಿ ಈ ಪ್ರಬಂಧಗಳಲ್ಲಿ ವ್ಯಕ್ತವಾಗಿವೆ. ಕವಿಸಂಘ, ನ್ಯಾಯ ಮೂರ್ತಿಯು ಮಂಗಳೂರಿಗಿತ್ತ ಭೇಟಿ, ಗೇರು ಹಣ್ಣಿನ ಶಿಕಾರಿ ಮೊದಲಾದ ವಿಷಯಗಳನ್ನು ಕುರಿತು ಅವರು ಬರೆದ ಪ್ರಬಂಧಗಳನ್ನೆಲ್ಲ ಮಂಗಳೂರಿನ ಒಂದು ಮಾಯೆಯು ಹೊನ್ನುಮಂಜು ಆವರಿಸಿದೆ.

ಪುಂಡರೀಕನು ಕೋದಂಡರ ಉಪನ್ಯಾಸಗಳ ಎರಡನೆಯ ಕಂತಿನ ಕಥಾನಾಯಕ. ಪೋಲೀಸ್ ಕಾನ್ಸ್ಟೆಬಲ್ ಮಹಮ್ಮದ ಬ್ಯಾರಿ, ನ್ಯಾಯ ಮೂರ್ತಿ ಮೊದಲಾದ ವ್ಯಕ್ತಿಗಳ ಚಿತ್ರಣದಲ್ಲಿಯೂ ಕೋದಂಡರು ಸ್ವಭಾವ ನಿರೂಪಣೆಯಲ್ಲಿ ತಮಗಿರುವ ಕೌಶಲ್ಯವನ್ನು ತೋರಿಸಿದ್ದಾರೆ. ಆದರೆ ಪುಂಡರೀಕನಿಗೆ ಅವರು ಮನಸೋತಿದ್ದಾರೆ. ಪುಂಡರೀಕನು ಎಲ್ಲರ ಹೃದಯಗಳನ್ನು ಸೆರೆಹಿಡಿಯುವುದರಲ್ಲಿ ಸಂಶಯವಿಲ್ಲ. ಅವನ ಕುಂದು—ಕೊರತೆಗಳೂ ಮೋಹಕವಾಗಿವೆ. ಹೊಸ ತಲೆಮಾರಿನ ಮೇಸ್ಟರುಗಳ ಪಡಿಯಚ್ಚಾಗಿದ್ದಾನೆ ಪುಂಡರೀಕ. ಅವನ ಲೋಪ-ದೋಷಗಳೇನೇ ಇರಲಿ; ಅವನ ಹೃದಯವಂತಿಕೆ ತಲೆದೂಗುವಂತಹದು. ಫೀಲ್ಡಿಂಗ್ ಎಂಬ ಕಾದಂಬರಿಕಾರನ Parson Adams ಎಂಬ ಪಾತ್ರ, ಡಿಕಿನ್ಸನ ಮಿಕಾಬರ್ ಎಂಬ ಪಾತ್ರ,—ಗಾತ್ರವೇನೇ ಇರಲಿ, ಆ ಮೋಡಿಯನ್ನು ಮನಸ್ಸಿನೆದುರು ತರುತ್ತಾನೆ ಕೋದಂಡರ ಪುಂಡರೀಕ.

ಒಂದೊಂದು ನಿಬಂಧವೂ ಒಂದೊಂದು ಕಥೆಯಂತೆ ಹೆಣೆದುಕೊಂಡಿದೆ. ಅದು ನಿಜವಾಗಿಯೂ ಕಥೆಯಲ್ಲ; ಸ್ಮೃತಿಪಥದ ರನ್ನಮಂಜಿನಲ್ಲಿ ನೋಡಿದ ಒಂದು ಸನ್ನಿವೇಶದ ಕಥನವದು. ಆದರೆ ಕಥೆಗಾರಿಕೆಯು ಓದುಗನನ್ನು ಮೋಹಿಸಿ ಮುಂದೊಯ್ಯುತ್ತದೆ. ಅವನಿಗೆ ಕೋದಂಡರ ಕಾವ್ಯಮಯತೆ—ವಿನೋದ—ವಿಡಂಬನೆಗಳನ್ನು ಸಲ್ಲಿಸುವುದರಲ್ಲಿ ಫಲಕಾರಿಯಾಗುತ್ತದೆ.

ಗೇರುಹಣ್ಣಿನ ಶಿಕಾರಿ, ಡಬ್ಬಲ್ ಸವಾರಿ ಮೊದಲಾದ ಪ್ರಬಂಧಗಳ

ಲ್ಲಿಯ ಸನ್ನಿವೇಶ ಚಮತ್ಕಾರ ಎಲ್ಲ ಪ್ರಬಂಧಗಳಲ್ಲಿಯೂ ಅರಳಿರುವ ಮಾನವ ಸ್ವಭಾವದ ಜ್ಞಾನ ಹಾಗು ಕರುಣಪೂರಿತ ಮಂದಹಾಸ, ಜೀವನ ವಿಮರ್ಶೆ;- ಇವೆಲ್ಲ ಗುಣಗಳು ಈ ಪ್ರಬಂಧ ಮಾಲೆಗೆ ಒಂದು ಸಮರ್ಥ ಅರ್ಥಪೂರ್ಣತೆ ಯನ್ನು ತಂದುಕೊಡುತ್ತವೆ. ಒಳ್ಳೆಯ ಸಾಹಿತ್ಯವನ್ನು ಕಾಲಕಾಲಕ್ಕೆ ನವೋ ನವವಾಗಿ ಮಾಡುವ ಗುಣಗಳು ಇವು. ಅಲ್ಲಲ್ಲಿ ಆಧುನಿಕ ಕನ್ನಡ ಸಾಹಿತ್ಯ ದೊಡನೆ—ವಿಶೇಷವಾಗಿ ಪದ್ಯ ಕಾವ್ಯದೊಡನೆ--ಲೇಖಕರು ಎಸಗುವ ಪ್ರೇಮ ಕಲಹವು ಮನೋಹರವಾಗಿದೆ. ಒಂದು ದೃಷ್ಟಿಯಿಂದ ಈ 'ಉಪನ್ಯಾಸಗಳ' ರಾಮಾಶ್ವಮೇಧಕ್ಕೆ ಇಂದಿನ ಕನ್ನಡ ಕಾವ್ಯವನಿತೆಯೇ ಮನೋರಮೆಯಾಗಿ ದ್ದಾಳೆಂದು ಹೇಳಬಹುದು.

ಎರಡನೆಯ ಭಾಗದಲ್ಲಿ ಕೋದಂಡರ ಶರಸಂಧಾನವು ಇನ್ನಿಷ್ಟು ಕುಶಲ ವಾಗಿದೆ. ಅವರ ಕೂರ್ಗಣೆಗಳ ಮೊನೆಯು ತೀಕ್ಷ್ಣತರವಾಗಿದೆ. ಈಗ ಮರೆಯಿಂದಲ್ಲ, ಬಹಿರಂಗವಾಗಿಯೇ ಬಾಣಗಳನ್ನು ಕೋದಂಡರು ಮಳೆ ಗರೆಯುತ್ತಿದ್ದಾರೆ. ಅವರ ಈ ಧನುರ್ವಿದ್ಯೆಯನ್ನು ಕನ್ನಡ ನಾಡೆಲ್ಲ ಕಣ್ತುಂಬ ನೋಡಲಿ.

ವೀಸನಗರ,
(ಉತ್ತರ ಗುಜರಾಥ)
ತಾ. ೮-೬-೧೯೪೭.

**ವಿ. ಕೃ. ಗೋಕಾಕ.**

# ಎರಡು ಮಾತು

ಕೋದಂಡನ ಉಪನ್ಯಾಸಗಳ ಎರಡನೆಯ ಭಾಗವನ್ನು ಕನ್ನಡಿಗರ ಮುಂದಿಡುವಾಗ ಎರಡು ಮಾತುಗಳನ್ನು ಹೇಳಲು ಬಯಸುತ್ತೇನೆ. ಹತ್ತು ವರ್ಷಗಳ ಹಿಂದೆ ಇದರ ಮೊದಲ ಭಾಗವನ್ನು ನಾನು ದಿವಂಗತ ಪೇಜಾವರ ಸದಾಶಿವರಾಯರಿಗೆ ಒಲವಿನ ಕಾಣಿಕೆಯಾಗಿ ಪ್ರಕಟಿಸಿದ ನಂತರ ಆ ಗೆಳೆಯರು ಅಕಾಲಮೃತ್ಯುವಿಗೆ ತುತ್ತಾದರು ಶ್ರೀಮಾನ್ ಪೇಜಾವರರು ಮುಗಿಲ ಮಧ್ಯದಲ್ಲಿ ಮಿಂಚಿದ ಜ್ಯೋತಿಯಂತೆ ತೋರಿ,ಕ್ಷಣಾರ್ಧದಲ್ಲೆಂಬಂತೆ ಅದೃಶ್ಯವಾದುದು ಶೋಚನೀಯವಾಗಿದೆ. ಈ ಉಪನ್ಯಾಸಗಳ ಎರಡನೆಯ ಭಾಗವನ್ನು ಪ್ರಕಟಿಸುವಾಗ ಅವರ ನೆನಪು ನನಗುಂಟಾಗುವುದು ಸಹಜವಾಗಿದೆ.

ನಾನು ಕಂಡ ತರುಣರಲ್ಲಿ ಪೇಜಾವರ ಸದಾಶಿವ ರಾಯರು ಉತ್ಸಾಹಿಗಳಾಗಿದ್ದರು. ಸಮಯ ಬಂದಾಗ ಇಡೀ ಲೋಕವನ್ನೆ ಅಳೆಯಬಲ್ಲೆನೆಂಬ ಧೈರ್ಯವೂ ಶಕ್ತಿಯೂ ಅವರಲ್ಲಿ ಇದ್ದವು. ಕನ್ನಡದ ಮೇಲೆ ಅವರ ಅಭಿಮಾನವು ಅವರ ಸ್ವೈಜಶಕ್ತಿಯು ಪ್ರಾದುರ್ಭಾವವಾಗಿದ್ದು, ಆಸಮಾನವೂ ಫಲೋನ್ಮುಖವೂ ಆಗಿ ಅವರ ಸ್ನೇಹಿತರೆಲ್ಲರಿಗೂ ತೋರಿಬರುತ್ತಿತ್ತು; ಕನ್ನಡಕ್ಕೆ ಅವರಿಂದ ಆಗಬಹುದಾಗಿದ್ದ ಎಲ್ಲವೂ ಮಣ್ಣುಪಾಲಾಯಿತು. ಶಕ್ತಿಯಿದ್ದವರು, ಅಭಿಮಾನವಿದ್ದವರು, ಕನ್ನಡದ ಆಶಾಂಕುರರಾಗಿದ್ದವರು— ಹೀಗೆ ಕಳಚಿಬೀಳುವಾಗ ಕನ್ನಡದ ಭವಿಷ್ಯತ್ತಿಗೊಂದು ಆಘಾತವೆಂದು ದುಃಖಿಸಬೇಕಾಗಿದೆ.

ಪೇಜಾವರರಿಗೂ ನನಗೂ ಅಕಸ್ಮಾತ್ ಭೇಟಿಯುಂಟಾದುದು. ನಾನಾಗ ಉಪಾಧ್ಯಾಯನಾಗಿದ್ದೆ. ಅವರಿನ್ನೂ ವಿದ್ಯಾರ್ಥಿಗಳಾಗಿದ್ದರು. ನಾವು ಸಂಧಿಸಿದ ಮೊದಲನೆಯ ದಿನ ಯಾವ ವಿಚಾರವನ್ನಿಟ್ಟುಕೊಂಡು ಮಾತಾಡಿದೆವೆಂದು ನನಗಿಂದು ಸ್ಮರಣೆಯಿಲ್ಲ. ಹಾಗಿದ್ದರೂ ಆ ದಿವಸಕ್ಕೆ ನಾನು ಅವರ ಹೃದಯದಲ್ಲಿ ಹುದುಗಿದ್ದ ಕನ್ನಡದ ಕಿಡಿಯನ್ನು, ತಾರುಣ್ಯದ ಧೈರ್ಯವನ್ನು ನಿಃಸ್ವಾರ್ಥದ ವಿಭೂತಿಮತ್ತ್ವವನ್ನು ಮನಗಂಡಿದ್ದೆನು. ಮರುದಿನ ನಮ್ಮ ಮಿತ್ರ ಮಂಡಳಿಯ ಸಭೆಯಲ್ಲಿ ಅಖಿಲ ಸೇವಾ ಗ್ರಂಥಮಾಲೆಯ ಸಂಪಾದಕತ್ವವನ್ನು ನಾನು ಬಿಟ್ಟುಕೊಟ್ಟು ಅದನ್ನು ಪೇಜಾವರರ ಹಸ್ತಕ್ಕೊಪ್ಪಿಸಿದೆನು. ಕನ್ನಡದ ಗೆಲುವುಂಟಾಗಬೇಕಾದರೆ, ಕನ್ನಡದ ಮುನ್ನಡೆಯು ಯಶ

ಸ್ವಿಯಾಗಿ ನಡೆಯಬೇಕಾದರೆ, ಅದು ತರುಣರಿಂದ, ಸಂಸಾರದ ತಾಪತ್ರಯ ದಿಂದ ಹೊರಗಾದವರಿಂದ ಆಗಬೇಕಾದುದು ಎಂಬುದು ಆ ಕಾಲದ ನನ್ನ ದೃಢವಾದ ನಂಬಿಕೆಯಾಗಿತ್ತು. ಪೇಜಾವರರು ಪದ್ಯಸಂಗ್ರಹವೊಂದನ್ನು ಮಾಡುವುದೆಂದು ನಿಶ್ಚಯಿಸಿದರು. ಐವತ್ತು ಪುಟಗಳ ಆ ಪುಸ್ತಕಕ್ಕೆ ಅವ ರೊಂದು ಚಿಕ್ಕ ಮುನ್ನುಡಿಯನ್ನು ಬರೆದು, ಕವಿಯು ಪ್ರಲಯಾತೀತನೆಂದು ಹಿಗ್ಗಿ, ನಾಡದೇವಿಗೆ ಹಾಡಸೇವೆ ಮಾಡಿದರು. ತಾರುಣ್ಯದ ಚಾಪಲ್ಯವಿದ್ದವ ರಾಗಿ, ಆ ಚಾಪಲ್ಯದೊಡನೆ ಕನ್ನಡದ ಅಭಿಮಾನವನ್ನು ತೋರಿಕೊಂಡು ಒಂದೇ ಒಂದು ದಿನದೊಳಗೆ "ಅಲರೆ"ಂಬ ಆ ಗ್ರಂಥದ ೨೦೦ ಪ್ರತಿಗಳನ್ನು ತಮ್ಮ ಒಡನಾಡಿಗಳಲ್ಲಿ ಮಾರಿ, ಇನ್ನೆರಡು ದಿನಗಳಲ್ಲಿ ಅವುಗಳ ಮೂಲ್ಯವೆಲ್ಲ ವನ್ನು ಸಂಗ್ರಹಿಸಿ ತಂದೊಪ್ಪಿಸಿದ್ದರು. ಒಂದು ಕಿಡಿಯು ಕಾರಣದಿಂದಾಗಿ ಕನ್ನಡದ ಬೆಳಕು ಇಡೀ ವಿಶ್ವವಿದ್ಯಾಲಯದಲ್ಲಿ ಪಸರಿಸಿತು. ಅದರ ನಂತರ ಮಂಗಳೂರಿನ ವಿದ್ಯಾರ್ಥಿಗಳು ಕನ್ನಡದ ಅಭಿಮಾನಕ್ಕೆ, ಕನ್ನಡದ ಪ್ರೇಷ್ಠ ತೆಗೆ ತಲೆದೂಗಿ ಭಕ್ತರಾದರು. ಉದ್ದಾಮ ಪಂಡಿತರಿಂದ ಮಾಡಲಾಗದ ಕನ್ನ ಡದ ಸೇವೆಯು ಮಂಗಳೂರಲ್ಲಿ ತರುಣರಿಂದ ಸಾಧ್ಯವಾಗಿದೆಯೆಂಬುದಕ್ಕೆ ಇದೊಂದು ಸಾಕ್ಷ್ಯವಾಗಿದೆ.

ಪೇಜಾವರರು ವಿದ್ಯಾರ್ಥಿಗಳಾಗಿಯೆ ಕಡೆಯ ವರೆಗೆ ಉಳಿದವರು. ಆದರೆ, ತಮ್ಮ ಅಭ್ಯಾಸದ ಬಿಡುವಿನಲ್ಲಿ ಕತೆ ಕವಿತೆಗಳನ್ನು ತುಂಬಾ ಬರೆದ ವರು. ಒಂದು ಸಮಯದಲ್ಲಿ ಅವರ ಲೇಖನಗಳಿಲ್ಲದ ಪತ್ರಿಕೆಯೆ ಕರ್ನಾಟಕ ದಲ್ಲಿ ಇರಲಿಲ್ಲ. ಕತೆಯೆಂದು, ಕವಿತೆಯೆಂದು, ಪ್ರಬಂಧವೆಂದು, ಅವರು ಗೀಚಿದ್ದೇ ಕಲೆಯಾಗಿತ್ತು. ಕರ್ಣಾಟಕದ ಸಾಹಿತ್ಯದ ವಿಚಾರವಾಗಿ ನಾವು ವಿಚಾರ ವಿನಿಮಯವನ್ನು ಮಾಡುವಾಗಲೂ ಅವರ ಕಲಾದೃಷ್ಟಿಯು ಎದ್ದು, ದಿಗಂತವನ್ನು ಭೇದಿಸುವಂತಿತ್ತು. ಅವರು ಸಂಪಾದಿಸಿದ ಪದ್ಯ ಸಂಗ್ರಹಕ್ಕೆ ಒಂದು ನಾಮಕರಣವಾಗಬೇಕಾಗಿತ್ತು. ಅದರ ಪೌರೋಹಿತ್ಯಕ್ಕಾಗಿ ಅವರು ನನ್ನನ್ನು ತಮ್ಮ ಓದುಮನೆಗೆ ಕರೆದಿದ್ದರು. ನಾಮಕರಣದ ಸಮಯದಲ್ಲಿ ಕರ್ಣಾಟಕ ಗ್ರಂಥಗಳ ವಿಮರ್ಶೆಯು ತುಂಬಾ ನಡೆಯಿತು; ಆದರೆ ಸಮ ರ್ಪಕವಾದ ಯಾವ ನಾಮವೂ ಮನಸ್ಸಿಗೆ ಹೊಳೆಯಲಿಲ್ಲ. ಕಡೆಗೆ ಸುಧಾರಿ ಸುವ ನೆವದಿಂದ "ತರಗು" ಎಂಬ ಹೆಸರಿಟ್ಟರಾಗದೆ, ಎಂದು ಸೂಚಿಸಿದೆನು. ತರಗೆಂದು ನೀವು ಸೂಚಿಸುವುದಾದರೆ, "ಅಲರೆ"ಂದು ನಾನು ನಾಮಕರಣ

ಮಾಡುವೆನೆಂದು, ಜಯಶ್ರೀಯನ್ನು ಕಂಡವರಂತೆ, ಅಪ್ರಾಪ್ಯವನ್ನು ಹೊಂದಿದವರಂತೆ, ಮುಗುಳುನಗೆ ನಕ್ಕು ಬಿಟ್ಟರು. ಅಲರು! ಎಷ್ಟು ಕಲಾಪೂರ್ಣ! ಎಷ್ಟು ಅರ್ಥ ಪೂರ್ಣ!! ತರಗಿನ ಹಿಂಜಾಲದಲ್ಲಿ ಎಷ್ಟು ಸೌಂದರ್ಯ ಪರಿಪೂರ್ಣ?—ಅಲರು, ಫಲೋನ್ಮುಖವಾದ ಅಲರು, ದೇವಿಯ ಪೂಜೆಗಾಗಿ ಕೀಳಲ್ಪಟ್ಟಿತು. ಆದರಲ್ಲಿನ ಮಧುವಿನ್ನೂ ಪಕ್ವವಾಗಿ ಫಲವಾಗಿದ್ದಿಲ್ಲ. ಆದರೆ ಮಧುರಸದ ಸವಿಯು ಕನ್ನಡದ ಭವಿಷ್ಯತ್ತಿನಲ್ಲಿ, ಕನ್ನಡದ ಸಾಹಿತ್ಯದ ಚರಿತ್ರೆಯಲ್ಲಿ ಇಳಿದು ಹೋಗುವಾಗ, ಕನ್ನಡದ ತರುಣರು ಕನ್ನಡಕ್ಕಾಗಿ ಬದ್ಧ ಕಂಕಣರಾದುದು ಪ್ರಶಂಸನೀಯವಾಗದೆ ಹೋಗದು.

ನನಗೆ ಪೇಜಾವರರಲ್ಲಿ ಅಸಮಾನವಾದ ಆಸ್ಥಾಂಕುರವಿದ್ದಿತು. ಅವರ ಕಣ್ಣಿನ ಗೊಂಬೆಯಲ್ಲಿ ಅವರ ಸುತ್ತು ಮುತ್ತಲಿನ ಪ್ರಕೃತಿಯ ಸ್ಥಿತಿಗತಿಗಳು ಎಲ್ಲವೂ ಪ್ರತಿ ಬಿಂಬಿತವಾಗುತ್ತಿದ್ದವು. ಮನುಷ್ಯನ ಹೃದಯದಲ್ಲಿ ಹುದುಗಿದ್ದ ಅಪಾರವಾದ ವ್ಯಾಪಾರವನ್ನು ತಿಳಿಯಲಿಕ್ಕೆ ಅವರಲ್ಲಿ ಅತುಲವಾದ ಕಲ್ಪನಾ ಶಕ್ತಿಯಿದ್ದಿತು. ಆ ಕಲ್ಪನಾಶಕ್ತಿಯ ಬಲದಿಂದ ಶಬ್ದಚಿತ್ರಗಳನ್ನು ಕಲ್ಪಿಸಿಕೊಂಡು ದಕ್ಷಿಣ ಕನ್ನಡದ ಕವಿಗಳಲ್ಲಿ ಹೊಸಮಾರ್ಗವೊಂದನ್ನು ಅವರು ಕಲ್ಪಿಸಿದ್ದರು. ಅವರ ಆವೊಂದು ವೈಶಿಷ್ಟ್ಯವನ್ನು ಮನಗಂಡ ನಾನು "ಕೋದಂಡನ ಉಪನ್ಯಾಸಗಳು" ಎಂಬ ನನ್ನ ಹೊಸ ಪುಸ್ತಕವೊಂದನ್ನು ಅವರಿಗೆ ಗೆಳೆತನದ ಕುರುಹಿಗಾಗಿ, ಕ್ರಿಸ್‌ಮಸ್ ಕಾಣಿಕೆಯಾಗಿ ಅರ್ಪಿಸಿದ್ದೆನು. ಆ ಕಾಣಿಕೆಯನ್ನವರು ಒಪ್ಪಿ ಬರೆದ ಪತ್ರದಲ್ಲಿ ನಮ್ಮಿಬ್ಬರ ಪರಸ್ಪರ ಸಂಬಂಧವನನ್ನು ಕುರಿತು ಆವರು ತಿಳಿಸಿದ್ದರು. ಮೊದಲವರಿಗೆ ನನ್ನ ಮೇಲೆ ಪೂಜ್ಯ ಭಾವವಿದ್ದು, ಆ ಭಾವವು ಕ್ರಮೇಣ ಮಾಯವಾಗುತ್ತ ಬಂದು, ಗೆಳೆತನವಾಗಿ ಮಾರ್ಪಟ್ಟಿತೆಂದೂ ಆ ಗೆಳೆತನದ ಕಾರಣದಿಂದಾಗಿ ಹೆಗಲೊಡ್ಡಿ ಎರಡು ವರ್ಷಗಳ ಕಾಲ ಕನ್ನಡದ ಸೇವೆಮಾಡಬಹುದಾಯಿತೆಂದೂ ಅಭಿಪ್ರಾಯಪಟ್ಟರು. ಮೊದಲಿನಿಂದ ನನಗೆ ಅವರ ಮೇಲೆ ಸ್ನೇಹಭಾವವಿಲ್ಲದೆ ಮತ್ತಾವ ಭಾವವೂ ಉಂಟಾಗಲಿಲ್ಲ; ಸ್ನೇಹಿತರಾಗಿ, ನಾವು ಭಿನ್ನಾಭಿಪ್ರಾಯಗಳನ್ನು ಒಳಗೊಂಡುದುಂಟು; ಸ್ನೇಹಿತರಾಗಿ, ಮಂಗಳೂರಿಗೆ ಇನ್ನೆರಡು ತಿಂಗಳಲ್ಲಿ ಬಂದು ನನ್ನೊಡನೆ ಅವರು "ನಮ್ಮ ಕವಿತೆಗಳ" ಸಂಪಾದನದ ಕೆಲವು ವಿಚಾರಗಳಲ್ಲಿ ಖಾಡಾಖಾಡಿ ಕೇಶಾಕೇಶಿಗೆ ಸಿದ್ಧರಿದ್ದರೆಂದೂ ಬರೆದಿದ್ದರು. ಆ ಪತ್ರವನ್ನು ಓದಿದಾಗ ಕೇಶಾಕೇಶಿಗೆ ಸಿದ್ಧನಿಲ್ಲದ ನಾನು ಮನಸ್ಸಿನಲ್ಲಿಯೆ ನಕ್ಕು, ಹಿಂದಿನ ಆ ಉತ್ಸಾಹೀ ತರುಣನು

ಇನ್ನೂ ತರುಣನಾಗಿರುತ್ತಾನೆ. ಇನ್ನೂ ಚಪಲನಾಗಿರುತ್ತಾನೆ, ಎಂದು ಮನವರಿಕೆಗೊಂಡೆನು. ಹೌದು. ತರುಣನಾಗಿ ಚಪಲತೆಯೆಲ್ಲ ನನ್ನೂ ಬಿಟ್ಟು ಪ್ರಲಯಾತೀತನಾಗಿ ಬಿಟ್ಟನು'

ಶ್ರೀ ಪೇಜಾವರರ ನಿಧನದಿಂದ ಮಂಗಳೂರಿನ ಕನ್ನಡದ ಪುನರುತ್ಥಾನವು ಕೆಲವು ಕಾಲಕ್ಕೆ ಹಿಂದಕ್ಕೆ ಸರಿಯಿತು. ಇಟಲಿಗೆ ತೆರಳುವ ಮೊದಲು ಮಿತ್ರಮಂಡಳಿಯು ಪತ್ರಿಕೆಯೊಂದನ್ನು ಪ್ರಕಟಿಸಬೇಕೆಂದು ನನ್ನನ್ನವರು ಒತ್ತಾಯಪಡಿಸಿದರು. ನಾನದಕ್ಕೆ ನನಗೆ ಸಹಜವಾದ ಸ್ವಭಾವದ ಕಾರಣದಿಂದಾಗಿ ಕಿವಿಗೊಡಲಿಲ್ಲ. ಅದರಿಂದವರು ನೊಂದಿರಬಹುದು. ನಾನು ಸೂಚಿಸಿದ ಪ್ರತಿಯೊಂದು ಮಾತಿಗೂ ಹಾಕಿಕೊಟ್ಟ ಪ್ರತಿಯೊಂದು ಹವ್ಯಾಸಕ್ಕೂ ಸೈಗುಟ್ಟಿದ ಅವರು ನನಗೆ ಮಾಡಿದ ಸೂಚನೆಯನ್ನು ಕೃತಾರ್ಥವನ್ನಾಗಿ ಮಾಡಲು ಅಶಕ್ತನಾದೆನು. ಅವರ ಆಶೆಯ ಕೋಟಿಗೆ ನಾನು ಎಟಕದೆ ಹೋಗಿ, ಅವರ ಆಶೆಯೂ ಕುಗ್ಗಿದ್ದಿರಬಹುದು. ಅವರು ಹೊರಡುವ ದಿವಸ ರೈಲ್ವೆ ನಿಲ್ದಾಣದಲ್ಲಿ ನಾನವರಿಗೆ ನನ್ನ ಪರವಾಗಿಯೂ ಮಿತ್ರ ಮಂಡಳಿಯ ಪರವಾಗಿಯೂ ಹೂವಿನ ಬುಗ್ಗೆಯೊಂದನ್ನು ಕೊಂಡು ಹೋದಾಗ ಅವರನ್ನು ಕಾಣಲು ನನ್ನ ಮನಸ್ಸು ಹೆದರಿತ್ತು, ನನ್ನ ಹೃದಯವು ನಾಚಿತ್ತು! ಅವರು ತಿರುಗಿ ಸ್ವದೇಶಕ್ಕೆ ಮರಳಿದಾಗ ಅವರಿಂದ ತಿರುಗಿ ಸ್ಫೂರ್ತಿಯನ್ನು ಪಡೆಯಬೇಕಾಗಿತ್ತು. ಇನ್ನು ಕಂಬನಿಯ ವಾರಿಧಿಯಲ್ಲಿ ಬಡಬಾಗ್ನಿಯಾಗಿ ಎದ್ದು ಪ್ರಕಾಶನಾಗಬೇಕು, ಆವಿರ್ಭವಿಸಬೇಕು

ನಮ್ಮ ವಿಚಾರದಲ್ಲಿ, ನಮ್ಮ ಕರ್ತವ್ಯದಲ್ಲಿ ನಾವು ಕೆಲವು ಕಾಲದವರೆಗೆ ಅಭಿನ್ನರಾಗಿದ್ದೆವು. ನಾನು ಬರೆದ ಲೇಖನವೊಂದು ಪ್ರಸಿದ್ಧ ಪತ್ರಿಕೆಯೊಂದರ ಸಂಪಾದಕರ ಪ್ರಮಾದದಿಂದ ಪೇಜಾವರರ ಹೆಸರಿನಲ್ಲಿ ಪ್ರಕಟವಾಯಿತು. ಸಂಪಾದಕರನ್ನು ಕೇಳಿದಾಗ ಅವರಿಗೂ ಆಶ್ಚರ್ಯವಾಗಿ ತೋರಿತು. ಮಂಗಳೂರಿನಲ್ಲಿ ಯುವಕರೊಬ್ಬರು ಮಾರ್ಗದಲ್ಲಿ ನನ್ನನ್ನು ಒಮ್ಮೆಲೆ ತಡೆದು, ನಾನು ಪೇಜಾವರರೆಂದು ಭ್ರಮಿಸಿ ಕಾಶಿಯಿಂದ ನಾನು ಬಂದುದು ಯಾವಾಗೆಂದು ಕೇಳಿದರು. ನಾನು ಪೇಜಾವರನಲ್ಲ, ಜೋಡುಮಠನೆಂದು ಆ ಯುವಕನಿಗೆ ಎಷ್ಟು ತಿಳಿಸಿದರೂ, ಆತನು ನಮ್ಮಿಬ್ಬರ ವಿಚಾರದಲ್ಲಿ ಮಾಡಿಕೊಂಡಿದ್ದ ಅಭಿಪ್ರಾಯವೆಲ್ಲವನ್ನು ಥಕ್ಕನೆ ಬಿಟ್ಟುಕೊಡಲು ಶಕ್ತನಾಗಲಿಲ್ಲ. ಈ ವಿಚಾರವನ್ನು ನಾನು ಪೇಜಾವರರಿಗೆ ತಿಳಿಸಿದಾಗ ಅವರಿಗದು ಆಶ್ಚರ್ಯವಾಗಿ ತೋರಲಿಲ್ಲ.

ಪತ್ರಿಕೆಗಳ ಮೂಲಕವಾಗಿ ಅಖಿಲ ಕರ್ಣಾಟಕಕ್ಕೆ ಚಿಕ್ಕ ಪ್ರಾಯದಲ್ಲಿಯೆ ಪರಿಚಿತರಾದವರು, ಮಂಗಳೂರಿನ ಜನರ ತಿಳುವಳಿಕೆಗೂ ಬಂದೂ ಊರಲ್ಲಿ ಇಲ್ಲವಾಗುವರಿಂದ ಜನರ ಕುತೂಹಲಕ್ಕೂ ಕೂಡ ಪಾತ್ರರಾಗಿ ಎಲ್ಲರಿಗೂ ಅವ್ಯಕ್ತಸ್ವರೂಪರಾಗಿದ್ದರು ಮಿತ್ರಮಂಡಳಿಯಲ್ಲಿ ಕೆಲಸ ಮಾಡುವವರು ಪ್ರತಿಯೊಬ್ಬರೂ ಪೇಜಾವರರಾದರು; ಅವರೆಲ್ಲರೂ ಹಾಗಿರಬೇಕಾದ್ದು ಶ್ರೇಯಸ್ಕರವಾಗಬಹುದು.

ಪೇಜಾವರರ ನೆನಪಿನೊಡನೆ ಕೋದಂಡನ ಉಪನ್ಯಾಸಗಳ ಎರಡನೆ ಭಾಗವನ್ನು ಪ್ರಕಟಿಸಿರುತ್ತೇನೆ ಈ ಭಾಗಕ್ಕೆ ನನ್ನ ಅಪೇಕ್ಷೆಯನ್ನು ಮನ್ನಿಸಿ ಮುನ್ನುಡಿಯೊಂದನ್ನು ಬರೆದು ಪ್ರೋತ್ಸಾಹಿದ ಶ್ರೀ ವಿ. ಕೃ. ಗೋಕಾಕರಿಗೆ ನಾನು ಚಿರಋಣಿಯಾಗಿರುತ್ತೇನೆ ಹಸ್ತ ಪ್ರತಿಗಳನ್ನು ಓದಿ ತಕ್ಕ ಸಲಹೆಗಳನ್ನು ಕೊಟ್ಟ ಶ್ರೀಮಾನ್ ಡಾ| ಎಸ್. ಸಿ ಭಟ್ಟರಿಗೂ ಈ ಪುಸ್ತಕವನ್ನು ಪ್ರಕಟಿಸಲು ಒಪ್ಪಿದ ಮೆಸರ್ಸ್ ಬಾಳಿಗಾ ಎಂಡ್ ಸನ್ಸ್, ಇವರಿಗೂ ಋಣಿಯಾಗಿರುತ್ತೇನೆ.

**ಜೆ. ವಾಮನ ಭಟ.**

# ೧. ಪುನರಾಗಮನ

ಹಲವು ಕಾಲ ಬೇರೆ ಜಿಲ್ಲೆಗಳಲ್ಲಿ ವಾಸಮಾಡಿ, ನಾನು ಸ್ವಗ್ರಾಮಕ್ಕೆ ಹಿಂತೆರಳಿ ಬಂದಿರುವೆನು.

ಆದರೆ ಆ ಹಿಂದಿನ ಕಾಲದ ಮಂಗಳೂರೆಲ್ಲಿ? ಇಂದಿನ ಕಾಲದ ಈ ಮಂಗಳೂರೆಲ್ಲಿ? ಬರೇ ಹತ್ತೆಂಟು ವರ್ಷಗಳಲ್ಲಿಯೇ ಚಿಕ್ಕ ಪಟ್ಟಣವೊಂದು ಗಾತ್ರದಲ್ಲಿಯೂ ರೂಪದಲ್ಲಿಯೂ ಮಾರ್ಪಟ್ಟು ಬರುವುವಾದರೆ, ಶತಮಾನಗಳ ಎರಕಗಳಲ್ಲಿ ಅದು ಹೇಗೆ ಗುರುತನ್ನು ಮಾರಿ ಹೋಗಬಹುದೆಂದು ಊಹಿಸುವುದು ಅಸಾಧ್ಯ ತಾನೆ. ಮಂಗಳೂರು ಇಂದಿನ ದಿವಸ ರೂಪಾಂತರವಾಗಿದೆ. ಮಂಗಳೂರಿನ ರಾಜ ಮಾರ್ಗಗಳಲ್ಲಿ ಗೌರವದ ಆ ಮುಂಚಿನ ಭವ್ಯತೆ, ನೀರವದ ಆ ಕಳೆದು ಹೋದ ಶಾಂತಿ, ತಂಗಾಳಿಯ ಆ ಹರಿದುಹೋದ ತಂಪು—ಇಂದು ಮಾಯವಾಗಿವೆ. ಕದಿರೆಯ ಗುಡ್ಡೆ, ಬಾವಟೆಯಗುಡ್ಡೆ, ಡಬ್ಬಲ್ ಗುಡ್ಡೆ, ಕೊಂಚಾಡಿಯ ಪದವು—ಇವುಗಳ ಹಿಂದಿನ ಗಾಂಭೀರ್ಯ ವೈಭವ ವಿಲಾಸ—ಎಲ್ಲವೂ—ಒಂದು ಹಂಡೆಯಲ್ಲಿದ್ದಷ್ಟೆಲ್ಲ ನೀರು ಒಂದು ಚಿಕ್ಕ ಕೊಡಪಾನದಲ್ಲಿ ಒತ್ತಿ ಒತ್ತಿ ತುಂಬಿಸಿ ಬಿಟ್ಟಂತೆ ಕಡಿಮೆಯಾಗಿ ಬಂದಿದೆ. ಆದರೆ ವಿಶಾಲವಾದ ಆ ಗಾಂಭೀರ್ಯ ವೈಭವ ವಿಲಾಸವೆಲ್ಲ ಹೋಗಿ ಚಿಕ್ಕ ಪರಿಮಾಣದಲ್ಲಿ ಅಡಕವಾಯ್ತು, ಯಾರದನ್ನು ಸಾಧಿಸಿದರು, ಯಾರದನ್ನು ಸಂಕ್ಷೇಪಗೊಳಿಸುವ ಹವ್ಯಾಸಕ್ಕೆ ಏಕೆ ತೊಡಗಿದರು—ಅದನ್ನು ಶೋಧಿಸಬೇಕಾಗಿದೆ. ಈ ಗುಡ್ಡೆಗಳಲ್ಲೀಗ ಕಾವ್ಯಸ್ಫೂರ್ತಿ ಉಂಟಾಗುವುದಿಲ್ಲ. ಕವಿತಾ ಝರಿಗಳು ಹರಿದು ಬರುವುದಿಲ್ಲ. ಈ ಗುಡ್ಡೆಗಳಿಗೆ ಗಾಂಭೀರ್ಯದ ಹಿನ್ನೆಲವನ್ನು ಸೇರಿಸಿಕೊಡುತಿದ್ದ ಭವ್ಯವಾದ ದೂರದ ದೃಶ್ಯಗಳು ಬಿಮ್ಮನೆ ಪಿಳಿ ಪಿಳಿ ನೋಡುತ್ತಿವೆ; ಸುಮ್ಮನೆ ಸಿಮಿ ಸಿಮಿ ನಿಂತುಕೊಂಡಿವೆ. ಮಂಗಳೂರಿನ ಕಾವ್ಯಸ್ಫೂರ್ತಿ, ಕಾವ್ಯ ದೃಷ್ಟಿ ಅಡಗಿ ಹೋಗಿವೆ, ಮುಗ್ಗಿ ಹೋಗಿವೆ, ಅಳಿದುಹೋಗಿವೆ.

ಸ್ವಗ್ರಾಮಕ್ಕೆ ಹಿಂತೆರಳಿ ಬಂದ ನಾನು ನನಗೆ ಹಿಂದೊಮ್ಮೆ ವಿಹಾರದಲ್ಲಿ ವಿಶ್ರಾಮವನ್ನೂ ವಿಶ್ರಾಮದಲ್ಲಿ ವಿಹಾರವನ್ನೂ ಕೊಟ್ಟು ಬೆಳೆಯಿಸಿ ತಂದ ಈ ಭವ್ಯವಾದ ಗುಡ್ಡೆಗಳಿಗೆ ಬಂದ ಮರುದಿನವೆ ಭೇಟಿಕೊಟ್ಟೆನು.

ಕದಿರೆಯ ಗುಡ್ಡೆಯ ಮೇಲೆ ನಿಂತು ನಾನು ಆಗ ನೋಡಿದುದು ದೂರದ ಡಬ್ಬಲ್ ಗುಡ್ಡೆಯನ್ನಲ್ಲದೆ— ಆ ಗುಡ್ಡೆ ಬೋಳಾಗಿದ್ದುದನ್ನೂ. ಅಂತರದಲ್ಲಿದ್ದ ಮನೆ ಮಠಗಳ ಹಾಗೂ ಇಗರ್ಜಿ ಬಂಗಲೆಗಳ ನಾಮರೂಪಂಗಳು ನನ್ನ ಮನಸ್ಸಿನಿಂದ ಕುಸಿದು ಹೋಗಿದ್ದುವು. ಬಾವಟೆಗುಡ್ಡೆಯ ಮೇಲಿಂದ ನನಗೆ ಕಂಡುದು ದೂರದಲ್ಲಿ ಸಮುದ್ರವಲ್ಲದೆ—ಆ ಸಮುದ್ರವು ನಿರ್ವೀಚಿಯೂ ನಿಶ್ಚೇತನವೂ ಆಗಿದ್ದುದೂ. ಅಂತರದಲ್ಲಿ ತಳಿರ್ಮರಗಳೂ ಅವುಗಳೆಡೆಯಿಂದ ಹೊರಡುವ ಪಕ್ಷಿಗಳ ಕೂಗೂ ಹಿಮ್ಮೆಟ್ಟಿ ಹೋಗಿದ್ದುವು. ನನಗೆ ಬೇಸರವಾಗಿ ನಾನು ಕಡೆಗೆ ಹಂಪನಕಟ್ಟೆಯ ರಾಜ ಮಾರ್ಗಕ್ಕೆ ಬಂದಿಳಿದೆನು.

ಹಂಪನಕಟ್ಟೆಯ ರಾಜಮಾರ್ಗವೂ ಮಾರ್ಪಟ್ಟು ಹೋಗಿತ್ತು. ಮಾರ್ಗದ ಬದಿಗಳಲ್ಲಿ ರಿಪೇರಿಗೆಂದು ಸಂಚಯವಾಗಿಡುವ ಕಲ್ಲುಗಳ ರಾಶಿಯು ಎಲ್ಲಿಯೂ ಕಾಣುವುದಿಲ್ಲ. ಹಿಂದೊಮ್ಮೆ ರಾತ್ರಿ— ಒಂದು ಗಂಭೀರದ ರಾತ್ರಿ ಅದೇ ಮಾರ್ಗವಾಗಿ ಹೋಗುತ್ತಿದ್ದಾಗ—ಮುನ್ಸಿಪಲ್ ಕೌನ್ಸಿಲರ್ ಶಾಮಯ್ಯ ನನ್ನು ಕಂಡ ನೆನಪು ಆಗ ತಾನೆ ಜಗ್ಗೆಂದು ನನಗೆ ಬಂದುಬಿಟ್ಟಿತು. ಶಾಮಯ್ಯನು ತನ್ನ ಕಣ್ಣುಗಳಿಗೆ ದಪ್ಪವಾದ ಹರಳುಗಳಿದ್ದ "ಲಾಂದ್ರ"ವನ್ನು ಇಟ್ಟು ಕೊಂಡು ನಡೆಯುತ್ತಿದ್ದನಾದರೂ ದೀಪದ ಪ್ರಕಾಶ ಸಾಕಾಗದೇನೋ, ತಲೆಯಲ್ಲಿ ಸಂಚರಿಸುವ ನೂರಾರು ವಿಷಯಗಳೊಡನೆ ತಾನೂ ಸಂಚರಿಸುತ್ತಿದ್ದುದರಿಂದಲೇನೋ ನೆಟ್ಟಗೆ ಮುರ ಕಲ್ಲುರಾಶಿಯ ಮೇಲೆ ಹಾದುಹೋಗಿ "ಮುರವೈರಿ''ಯಾಗಿ ಬಿಟ್ಟನು. "ಈ ಹಾಳು ಮುನ್ಸಿಪಾಲ್ಟಿ''ಯೆನ್ನುತ್ತ ರಕ್ತವು ಬಸಿಯುತ್ತಿರುವ ಕಾಲ್ಬೆರಳನ್ನು ತನ್ನ ಎಡಕೈಯಿಂದ ಮೇಲಕ್ಕೆತ್ತಿ ಹಿಡಿದು, ಮುಂದಕ್ಕೆ ಕುಂಟುತ್ತಿದ್ದಾಗ, "ಏನು ಸ್ವಾಮಿ, ಇಂದಿನ ಕೌನ್ಸಿಲ್ ಸಭೆ ಮುಗಿದಿಲ್ಲವೆ?"ಎಂದು ನಾನು ಪ್ರಶ್ನಿಸಿದ್ದೆನು. ಆಗ ಶ್ಯಾಮಯ್ಯನು ಬೆಚ್ಚಿಬಿದ್ದು ಕಣ್ಣರಳಿಸಿದುದೂ ನೆನಪಿಗೆ ಹೊಡೆದುಬಂತು. ಆದರೆ ಕಲ್ಲು ಮಣ್ಣು, ಹೊಂಡ ದಿಡ್ಡು ಮೊದಲಾದ ಏರುತಗ್ಗುಗಳಿಂದ ತುಂಬಿ ಹೋದ ಆ ಕಾಲದ ಸಾಹಸ ಜೀವನ, ಅಂತಹ ಜೀವನವನ್ನು ಕೆಲವೊಮ್ಮೆ ಹೊಗಳುವ, ಕೆಲವೊಮ್ಮೆ ತೆಗಳುವ ನನ್ನಂತಹವರ ಮನೋಭಾವನೆಯೂ ಇಂದು ನಾಮಶೇಷವಾಗಿ ಬಿಟ್ಟಿವೆ. ಕೆಳಗೇನೊ ಇಂದು ಚೂರು ಬಂಡೆಕಲ್ಲು ಇರಬಹುದು. ಆದರೆ, ಮಾರ್ಗದುದ್ದಕ್ಕೂ ತಾರು, ತಾರು ಬಳಸುತ್ತದೆ. ಮಧ್ಯಾಹ್ನದ ಹೊತ್ತಿಗೆ ವೈದ್ಯರಲ್ಲಿ ಹೋಗಬೇಕೆ? ಅರಸಿನ ಮಂಡಿಗೆಯಾದಲ್ಲಿ, ಕಾಲುಬಿಸಿಯೇರಿಯೇ ಕಾಯಿಲೆ

ಗುಣವಾಗಿ ವೈದ್ಯನಿಗೆ ಹೆಸರು ಮತ್ತು ದುಡ್ಡು. ಅಪರಾಹ್ನ ಕಾರ್ಯಾರ್ಥಿಯಾಗಿ ಹೋಗಬೇಕೆ? ನೆರಳಿಲ್ಲದೆ ಬಿಸಿಲಲ್ಲೆ ಬಳಲಿ, ಕಾರ್ಯಾರ್ಥವು ಬೇಡ, ಕಾರ್ಯ ಸಾಧನವೂ ಬೇಡವೆಂದು ಕೃಷ್ಣ ಭವನಕ್ಕೋ, ಇಂದ್ರ ಭವನಕ್ಕೋ ಸುದಾಮ ಭವನಕ್ಕೋ ಶರಣು! ಆಹಾ! ಆ ಹಿಂದಿನ ಅಶ್ವತ್ಥದ ಮರಗಳೆಲ್ಲಿ? ಆ ಮರಗಳಲ್ಲಿ ಸಂಜೆ ವೇಳೆ ಬಂದು ಗೂಡು ಸೇರುವ ಆ ಹಕ್ಕಿಗಳ ಕಲಕಲವೆಲ್ಲಿ? ಆ ಮರಗಳ ಕೆಳಗೆ ಸುತ್ತಲೂ ಹಾಸಿರುವ ಹಿಚಿಕೆಯ ಬಿಳುಪುಗಳ ಮೇಲೆ ನಿಂತು, ಅಲ್ಲಿಯ ವರೆಗೆ ಮಡಚಿದ್ದ ಕೊಡೆಗಳನ್ನು ತೆರೆದು ಬಿಡಿಸಿ ಸ್ನೇಹಿತರೊಡನೆ ಮಾತುಕತೆ ಮಾಡುವ ದಾರಿಹೋಕರ ಗುಂಪುಗಳೆಲ್ಲಿ? ಹಾ! ಹಂಪನಕಟ್ಟೆಯೆ! ಹಾ, ಗೋಳಿ ಮರಗಳೆ! ಹಾ, ಕಾಗೆಗಳ ಪಿಕಗಾಯನವೆ! ನೀವೆಂದು ಹಿಂದಕ್ಕೆ ಬರುವಿರಿ? ಕೋದಂಡನು ಹಿಂದಿರುಗಿ ಬಂದಿರುವನು. ಬನ್ನಿ, ಬಂದೊಮ್ಮೆ ಮುಖ ತೋರಿಸಿ.

ಮಂಗಳೂರಿನ ರಾಜಮಾರ್ಗಗಳೆಲ್ಲ ತಾರಿನ ಮಾರ್ಗಗಳಾಗಿ ಹೋಗಿವೆ. ಕಪ್ಪಗಿನ ತಾರೂ ಬಿಳಿಯಾಗಿ ಮಾರ್ಪಟ್ಟಿದೆ. ಅಲ್ಲಲ್ಲಿ ತಾರಿನಡಿಯ ಬಂಡೆಕಲ್ಲಿನ ಚೂರುಗಳು ಹೊಂಚುಹಾಕಿ ಸಂದರ್ಭ ಕಾಯುತ್ತಿವೆ. ಆದರೆ, ಆದರೇನು? ತಾರಿನ ಮಾರ್ಗದಲ್ಲಿ ನಡೆನಡೆದು ಕಡೆಗಿಳಿಯಬೇಕು ತಾರಿರದ ಕಲ್ಲುಚೂರಿನ ಬಿರುಸು ಮಾರ್ಗಕ್ಕೆ! ಕಲ್ಲು ಚೂರಿನ ಮಾರ್ಗದಿಂದ ಕಡೆಗೆ ಬಂದು ಮುಟ್ಟಬೇಕು, ಧೂಳಿಧೂಸರಿತವಾದ ಆ ಹಳೆಯ ಮಾರ್ಗಕ್ಕೆ, ರಾಜಮಾರ್ಗಕ್ಕೆ, ಅಲ್ಲವೆ? ಪುಣ್ಯಾತ್ಮರಾದವರ ಪಾದ ಧೂಳಿಯಿಂದ ಪವಿತ್ರವಾಗಿವೆ ಎಂದು ಹಾಡಿದ ರಾಜಮಾರ್ಗಗಳಲ್ಲವೆ ಅವು? ಎಷ್ಟು ಕೋಮಲವಾಗಿವೆ! ಎಷ್ಟು ತಂಪಾಗಿವೆ? ಎಷ್ಟು ಮೋಹಕವಾಗಿವೆ! ಪವಿತ್ರಾತ್ಮರು ನಡೆದು ಪಾವನವಾದ ಆ ಧೂಳಿಯಿನ್ನೂ ಸನಾತನತಮಕಾಲದಿಂದ ಮಳೆಯಲ್ಲಿ ತೊಯ್ದು, ಬಿಸಿಲಲ್ಲಿ ಒಣಗಿ, ಅನುಯಾಯಿಗಳಿಗೆಲ್ಲ ಶ್ರೀಗಂಧ ಮುಡಿಪ್ರಸಾದವಾಗಿ, ಅನುನಾಯಿಗಳಿಗೆಲ್ಲ ಪದಲಾಂಛನಪ್ರದವಾಗಿ ಉಂಟಾಗಿ ಬಂದ ರಾಜ ಮಾರ್ಗಗಳಲ್ಲವೆ ಅವು? ತಾರಿನ ಹಂಪನಕಟ್ಟೆ, ನೀನೊಂದೂ ರಾಜಮಾರ್ಗವೆ? ಮಳೆಯಲ್ಲಿ ನಡೆದು ಹೋಗುವ ಎಷ್ಟೊಂದು ಮಂದಿ ನಂಬುಗರು ಕಾಲು ಜಾರಿ ಬಿದ್ದು ಹೋಗಿಲ್ಲ? ಬಿಸಿಲಲ್ಲಿ ಕಾಲುರಿದು ಓಡಿ, ಎಷ್ಟು ಮಂದಿ ನಿನ್ನನ್ನು ಶಪಿಸಲಿಲ್ಲ? ಯಾವ ಪುಣ್ಯಾತ್ಮರ ಪಾದಹತಿಯಿಂದ ನೀನು ಪವಿತ್ರ

ವಾದೆ? ಪುಣ್ಯಾತ್ಮರೂ ಇಲ್ಲವೆ ನಿನ್ನ ಬದಿಯಾಗಿ ಹೋಗಲು? ಹಾ ಧಿಕ್, ಧಿಕ್ !

ನಾನು ಸ್ವಗ್ರಾಮಕ್ಕೆ ಹಿಂತೆರಳಿ ಬಂದಾಗ, ಹುಂಜ ಕೂಗಿದೆ ಯೆನ್ನಬೇಕು; ಕಾಲವು ವಿಸಾರಿಡೆಯೆನ್ನಬೇಕು. ಇಲ್ಲದಿದ್ದರೆ, ಹಿಂದೆ ಕವಿ ಸಂಘದಲ್ಲಿ ಕನ್ನಡಕ್ಕಾಗಿ ಉತ್ಸಾಹ ಉದ್ವೇಗಗಳಿಂದ ಸೇವೆ ಮಾಡುತ್ತ, ಇತರ ರಿಂದ ಸೇವೆಮಾಡಿಸುತಿದ್ದ ಆ ನ್ಯಾಯಮೂರ್ತಿಯೂ ನಿವೃತ್ತನಾಗಬೇಕೆ? ಕವಿ ಸಂಘದಲ್ಲಿಯೂ ದ್ವಾವಿಂಶರಲ್ಲಿಯೂ ಸಮತೂಕವಾಗಿ ಹಿರಿಮೆಗೂ ಗೌರ ವಕ್ಕೂ ಪಾತ್ರನಾದ ಆ ಗಾಡಿಂದೇವ ವಿದ್ವಾಂಸರೂ ಮಂಗಳೂರನ್ನು ಬಿಟ್ಟು ಹೋಗಬೇಕೆ? ಕದಿರೆಯ ಗುಡ್ಡೆಗೆ, ಬಾವಟೆಯ ಗುಡ್ಡೆಗೆ, ಡಬ್ಬಲ್ ಗುಡ್ಡೆಗೆ ಹೋಗಲು ಇಂದು ಆ ಸಂಗಾತಿ ನ್ಯಾಯಮೂರ್ತಿ ಕೋದಂಡನಿಗಿಲ್ಲ. ಮಂಗಳೂರಿನ ಭವ್ಯವಾದ ರಾಜ ಮಾರ್ಗಗಳಲ್ಲಿ ಒಡಕರಿಸಿ ನಾನಾ ವಿಚಾರ ಗಳನ್ನು ತೂಗಿಕೊಡುವ ಆ ಸಂಗಾತಿ ಗಾಡಿಂದೇವನೂ ಕೋದಂಡನಿಗಿಲ್ಲ. ಕವಿಗಳ ಊರಾದ ಮಂಗಳೂರು ರೂಪಾಂತರಗೊಂಡಿದೆ; ಮಾರ್ಪಟ್ಟು ಹೋಗಿದೆ.

## ೨. ಕವಿ ಸಂಘಕ್ಕೆ ಭೇಟಿ

ಮಂಗಳೂರಿಗೆ ಹಿಂತೆರಳಿ ಬಂದ ನಂತರ, ಮಾಡತಕ್ಕದ್ದೇನಿದೆ? ನೋಡ ತಕ್ಕದ್ದೇನಿದೆ? ಹಳೆಯ ಗೆಳೆಯ ನ್ಯಾಯಮೂರ್ತಿ ಸಾಹಿತ್ಯ ಕ್ಷೇತ್ರದಿಂದಲೆ ವಿರಾಮಹೊಂದಿ, ಉದ್ಯೋಗ ಸಂಪಾದನೆಯೆಂದು ಮುಂಬಾಯಿಗೋ ಮದ್ರಾ ಸಿಗೋ ತೆರಳಿ, ತನ್ನ ವಿಳಾಸ ಪತ್ತೆ ಒಬ್ಬನಿಗೂ ಆಗದ ಹಾಗೆ ವರ್ತಿಸಿ, ಮನ ಸ್ಸಿನ ಹೊರಗಲ್ಲದಿದ್ದರೂ ಕಣ್ಣಿನ ಹೊರಗಾಗಿರುತ್ತಾನೆ. ಕಣ್ಣಿಗೆ ಹೊರಗಾ ದವನು, ಮನಸ್ಸಿಗೂ ಹೊರಗಾಗುತ್ತಾನೆನ್ನುವರು. ಆದರೆ, ನ್ಯಾಯ ಮೂರ್ತಿಯ ಚುಟುಕೂ ವರ್ತಮಾನವು ತಿಳಿಯದಿದ್ದರೂ ಅವಕಾಶ ವುಂಟಾದಾಗಲೆಲ್ಲ ನ್ಯಾಯಮೂರ್ತಿಯ ಆ ಭವ್ಯ ದರ್ಶನ, ಆ ಚಮತ್ಕಾರಿ ಉತ್ಸಾಹ, ತಲೆಯ ಮೇಲಿನ ಆ ಗಾಂಧಿ ಟೊಪ್ಪಿ, ಮೈ ಮೇಲೆ ಯಾವಾಗಲೂ ಧರಿಸಿಕೊಳ್ಳುವ ಆ ಕಪ್ಪಗಿನ ಕೋಟು—ಇವೆಲ್ಲವೂ ವಾಯುವೇಗದಿಂದ ಒಂದರ ಹಿಂದೆ ಇನ್ನೊಂದಾಗಿ ಬಂದು ಮೂರ್ತಿಮಂತವಾಗಿ ತೋರುವುವು.

ನ್ಯಾಯಮೂರ್ತಿ ಮೊದಲನೆ ಬಾರಿ ನನ್ನನ್ನು ಕವಿ ಸಂಘಕ್ಕೆ ಎಳೆದೊಯ್ದುದು ನೆನಪಿಗೆ ಬರುವುದು. ಕವಿ ಸಂಘದ ಆ ಗಲಾಟೆಯು, ಆ ಉತ್ಸಾಹವು, ಆ ಶಕ್ತ್ಯತಿರೇಕದ ಸೇವೆಯೆಲ್ಲವೂ ಮೂರ್ತಿವೆತ್ತು ಸ್ಮರಣೆಗೆ ಮೂಡುವುದು. ಆದರೆ, ಉತ್ಸಾಹವಿದ್ದ ನ್ಯಾಯಮೂರ್ತಿಯೇಕೆ ಸಾಹಿತ್ಯದಿಂದ ವಿರಾಮ ಹೊಂದಿ ಕೂತನು?

ಕವಿ ಸಂಘದ ಕಾರ್ಯಕಲಾಪಗಳು ಹೇಗೆ ನಡೆಯುತ್ತಿರಬಹುದೆಂದು ತಿಳಿಯಲು ನನಗೆ ಕುತೂಹಲವುಂಟಾಯಿತು. ಒಬ್ಬಿಬ್ಬರು ಹಿರಿಯ ಸಾಹಿತಿಗಳೊಡನೆ ಕೇಳಿದೆನು. "ಏನೋ ಚಟುವಟಿಕೆ ಮಾಡುತ್ತಾ ಇದ್ದಾರೆ, ತಿಳಿಯದು,''ಎಂದರು. ಕೆಲವು ಕೊಲೇಜು ವಿದ್ಯಾರ್ಥಿಗಳೊಡನೆ ಪರಸ್ಪರವೆಂಬಂತೆ ವಿಚಾರಿಸಿದೆನು. "ನಾವರಿಯೆವು,'' ಎಂದರು. ಏನು? ಕವಿ ಸಂಘದ ಹೆಸರು ವಿದ್ಯಾರ್ಥಿಗಳಿಗೆ ತಿಳಿದಿಲ್ಲವೆ? ಏನಾಗಿದೆ, ಕವಿ ಸಂಘವು ನಿರ್ನಾಮವಾಗಿದೆಯೆ? ಜೀವನ್ಮೃತಾವಸ್ಥೆಯಲ್ಲಿದೆಯೇ? ಅದರ ಸ್ಥಾನದಲ್ಲಿ ಇತರ ಸಂಘಗಳು ಹುಟ್ಟಿ ಬಂದಿವೆಯೇ? ಮಂಗಳೂರಿನಲ್ಲಿ ಕನ್ನಡದ ಅಧಃಪತನವಾಯಿತೆ? ಆಹಾ, ನ್ಯಾಯಮೂರ್ತಿ, ನಿನ್ನುತ್ಸಾಹದಲ್ಲಿ ಒಂದಂಶವಾದರೂ ಮಂಗಳೂರಿನಲ್ಲಿ ಇಂದು ಉಳಿದಿದ್ದ ಪಕ್ಷಕ್ಕೆ "ಸಿರಿಗನ್ನಡಂಗೆಲ್ಗೆ''ಯೆಂಬ ಕೂಗು ನಾಲ್ದಿಕ್ಕಿಗೂ ಕೇಳಿಸುತ್ತಿತ್ತಲ್ಲ? ಬಾ! ಪತ್ರವ್ಯವಹಾರದ ಸಾಧನದಿಂದಲಾದರೂ ಮಂಗಳೂರಿನಲ್ಲಿ ಸಾಹಿತ್ಯದ ವಿದ್ಯುಚ್ಛಕ್ತಿಯನ್ನು ಹರಿಯಗೊಡಿಸು.

ಕವಿ ಸಂಘದ ಕಾರ್ಯಕಾರೀ ಸಭೆಯೊಂದು ಇಂದು ಉಂಟೆಂದು ಪತ್ರಿಕೆಯಿಂದ ತಿಳಿದು, ಸಭೆಯಾಗುವ ಸ್ಥಾನಕ್ಕೆ ಹೋಗಿ ನೋಡಿದೆನು. ನಾಲ್ಕೈವರು ಯುವಕ ಪ್ರಾಯದವರು ಒಂದು ಕಡೆ ಕೂತು ರೂಪಾಯಿ ಆಣೆ ಲೆಕ್ಕವನ್ನು ನೂಡುತ್ತ ಯಾವುದೊಂದನ್ನೊ ಮಾಡಬೇಕಾದರೆ, ಮೊಬಲಗು ಸಾಕಾಗದೆಂದೂ ಯಾವುದಿನ್ನೊಂದನ್ನೊ ಮಾಡಬೇಕಾದರೆ, ಅದನ್ನೆಲ್ಲ ಸಜ್ಜುಗೊಳಿಸಲು ತಮಗೆ ಅವಕಾಶವೆಲ್ಲಿಂದೆಂತಲೂ ಮಾತನಾಡುತಿದ್ದರು. ಇದೇನು ಮಾತು? ಹಿಂದೆ ಕವಿ ಸಂಘದಲ್ಲಿ ಈ ತರ್ಕದ ಸುಳಿವೇ ಇರಲಿಲ್ಲ. ''ಅದು ಮಾಡಬೇಕು, ಇದಾಗಬಾರದು. ಅದನ್ನು ಪುಷ್ಟೀಕರಿಸುತ್ತೇನೆ, ಇದನ್ನು ತಾನು ವಿರೋಧಿಸುತ್ತೇನೆ,'' ಎಂದು ಭುಜಗಳನ್ನು ಹಾರಿಸಿ, ಶರ್ಟಿನ ಕೈಗಳನ್ನು ಮೇಲಕ್ಕೆಳೆದು ಕೆಲಸವನ್ನು ಸಾಧಿಸುವ ಆ ಕವಿ ಸಂಘವೆಲ್ಲಿ? ಪ್ರತಿಭಟಿಸುವ ಆ ಕೆಲಸವೆಲ್ಲಿ? ಸಾವಧಾನವಾಗಿ, ನಿಧಾನವಾಗಿ—ಹಾಗಾದರೆ

ಹೀಗಾಗುತ್ತದೆ, ಹೀಗಾದರೆ ಹಾಗಾಗುತ್ತದೆಯೆನ್ನುವ ಕವಿ ಸಂಘದ ಈ ಕಾರ್ಯಕಾರಿ ಎಲ್ಲಿ? ಅಹುದೊ, ಬಸವಣ್ಣ?–ಅಹುದು. ಅಲ್ಲವೋ ಬಸವಣ್ಣ? ಅಲ್ಲವು. ಕವಿ ಸಂಘವೋ ಇದು? ಅಹುದು. ಕವಿ ಸಂಘವಲ್ಲವೊ ಇದು? ಅಲ್ಲವು.

ತಿಂಡಿ ಬಂದಿತು; ಕಾಫಿ ಗಾಜಿನ ಪಾತ್ರೆಗಳಲ್ಲಿಳಿಯಿತು. ಮಧ್ಯದಲ್ಲಿ ಹಿಂದೂ ಪತ್ರಿಕೆಯ ಎಡ್ವರ್ಟೈಯ್ಸುಮೆಂಟುಗಳಲ್ಲಿ ಕಣ್ಣೂ ಅರಳಿತು. ಒಬ್ಬನು ಇನ್ನೊಬ್ಬನೊಡನೆ, "ಅದಾರು ಅಲ್ಲಿ ನಿಂತವರು?" ಎಂಬ ಪ್ರಶ್ನೆಯನ್ನೂ ಅಂಕುರಿಸಿದನು.

ನಾನಾಗ ಎದುರು ಹೋಗಿ, "ಹೀಗೆಯೇ ನೋಡಿ ಹೋಗಲು ಬಂದೆ. ಹಿಂದೆ ಕವಿ ಸಂಘದ ನಾಮ ಮಾತ್ರ ಸದಸ್ಯನಾಗಿದ್ದೆ," ಎಂದು ಸ್ವಪ್ರಸ್ತಾವ ಕ್ಕೆಳಸಿದೆನು. ಕವಿ ಸಂಘದ ಕಾರ್ಯಕಾರಿಗೆ ತುಂಬಾ ಸಂತೋಷ ಉಂಟಾ ಯಿತು. ಒಬ್ಬೊಬ್ಬನೆ ನನ್ನನ್ನು ಪಿಳಪಿಳನೆ ನೋಡುತ್ತ, ಹಸ್ತಲಾಘವ ವನ್ನು ಕೊಟ್ಟು ಕುಳ್ಳಿರಿಸಿ, ಸಮೀಪದ ಹುಡುಗನಿಗೆ ಏನೋ ಸೂಚನೆ ಕೊಟ್ಟರು. ಸರಿ! ಹತ್ತೇ ನಿಮಿಷಗಳಲ್ಲಿ ಬಿಸಿಬಿಸಿ ಕಾಫಿ ನನ್ನೆದುರು ಇಳಿ ಯಿತು. ನನಗುಪಚಾರ ಮಾಡಿದರು; ಅದನ್ನೆಲ್ಲ ಸ್ವೀಕರಿಸಿದೆನು.

"ನ್ಯಾಯ ಮೂರ್ತಿಯೆಲ್ಲಿ?" ಎಂದು ಮೊದಲು ಕೇಳಿದೆನು. ಅವರಿಗೆ ನ್ಯಾಯಮೂರ್ತಿಯ ಅರಿವೇ ಇಲ್ಲ.

"ಮಾದಯ್ಯನೆಂಬವನು ನಮ್ಮ ಇನ್ನೊಬ್ಬ ಪ್ರಮುಖ ವ್ಯಕ್ತಿಯಾ ಗಿದ್ದ"ನೆಂದು ಮತ್ತೆ ಹೇಳಿದೆನು.

ಅವರೆಲ್ಲರೂ ಪರಸ್ಪರ ಮುಖಾವಲೋಕನಕ್ಕೆ ಆನುಗೊಳಿಸಿದರು.

ಇನ್ನು ಹೀಗೆ ಕೇಳುತ್ತಾ ಹೋದರೆ, ನನ್ನ ವ್ಯಕ್ತಿತ್ವದಲ್ಲಿಯೆ ಅವರಿಗೆ ಸಂಶಯವುಂಟಾಗಬಹುದೆಂದು ನನಗೆ ಹೆದರಿಕೆಯುಂಟಾಯಿತು. ಸರಿಯೆ! ತೇ ಹಿ ನೋ ದಿವಸಾ ಗತಾಃ ಎಂದು ನಿಟ್ಟುಸಿರು ಬಿಟ್ಟೆನು. "ನನಗೆ ನಿಮ್ಮ ಪರಿ ಚಯವಾಗಲಿಲ್ಲವಲ್ಲ!" ಎಂದು ಉರುಳಿಸಿದ ಶಬ್ದ ವೀಚಿಯಿಂದ ಅಲ್ಲಿ ಕೂತ ವರೆಲ್ಲವರಿಗೆ ಪ್ರದಕ್ಷಿಣೆ ಬಂದೆನು.

ಪರಸ್ಪರ ಪರಿಚಯವಾದ ನಂತರ, ಏನೇನೋ ಮಾತಾಡಿದೆವು. ಕಾರ್ಯ ಕಾರೀ ಮಂಡಳಕ್ಕೆ ಕಾರ್ಯವೆಲ್ಲ ಮರೆತು ಹೋಗಿತ್ತು. ನಾನೊಂದು ಭಾಷಣ ವೀಯಬೇಕೆಂದರು. ಆದರೆ, ನಾನೊಬ್ಬ ವಾಗ್ಮಿಯಲ್ಲವೆಂದೂ ಮಾತನಾಡುವ

ಯೋಗ್ಯತೆ ನನಗಿಲ್ಲವೆಂದೂ ಎಷ್ಟು ಹೇಳಿದರೂ ಕಾರ್ಯಕಾರಿ ಒಪ್ಪಲಿಲ್ಲ. ನಾನು ವಾಗ್ಮಿಯಲ್ಲದಿದ್ದರೆ, ಚಿಂತೆಯಿಲ್ಲವೆಂದರು. ನಾನು ಕೂತುಕೊಂಡೇ ಮಾತನಾಡಬಹುದು; ಸಭಿಕರ ಸಂಖ್ಯೆ ಹತ್ತಕ್ಕೆ ಮೀರಿರಲಾರದು.

ಕೇವಲ ಹತ್ತು ಮಂದಿಗೆ ಭಾಷಣ ಪ್ರದಾನವಾಗುವಷ್ಟು ಅವಸ್ಥೆಗೆ ಮಂಗಳೂರಿನ ಸಂಸ್ಕೃತಿ ಬಂದಿಳಿಯಿತೆ? ಎಂದು ಹೌಹಾರಿದೆನು. ಸಭಾಸದನವಲ್ಲಿ ಜನಕಿಕ್ಕಿರಿದು ಬಂದು ಕೂತಕೊಳ್ಳಲು ಸ್ಥಳಾಭಾವವಾಗಿ, ಸದನದ ಕಿಟಿಕಿಗಳಲ್ಲಿ ನಿಂತು, ಸದನದ ದ್ವಾರಗಳಲ್ಲಿ ಹೊಂಚುಹಾಕಿ, ಎಷ್ಟು ಜನರು ಭಾಷಣದ ಒಂದೇ ಒಂದು ಶಬ್ದವನ್ನಾಲಿಸದಿದ್ದರೂ ಏನೋ ಒಂದು ಉತ್ಸಾಹದಿಂದ ಮನೆಗೆ ಹಿಂತೆರಳುತಿದ್ದಿಲ್ಲ? ಹೀಗೆಲ್ಲ ವಿಚಾರವಲೆಗಳು ಮನಸ್ಸಿನಲ್ಲಿ ಹುಟ್ಟುತಿದ್ದಾಗ ಕಾರ್ಯಕಾರಿಯವನೊಬ್ಬನು ನಗುತ್ತ ನುಡಿದನು:—"ಕೋದಂಡರಾಯರೆ, ಇದು ಪತ್ರಿಕೆಗಳ ಯುಗ; ಆಕಾಶವಾಣಿಯ ಯುಗ. ಎಲ್ಲ ಪ್ರಚಾರವು ಈ ಪತ್ರಿಕೆಗಳಿಂದ, ಈ ಆಕಾಶವಾಣಿಯಿಂದ ಮನೆಮನೆ ಬಾಗಿಲಿಗೆ ಮುಟ್ಟುವಾಗ ನಮಗೆ ಒಣ ಭಾಷಣವೇಕೆ? ಅಲ್ಲವೆ?" ಎಂದರು.

"ಎಲ್ಲವೂ ಒಣಗುತ್ತಿದೆ. ಉತ್ಸಾಹವೂ ಉತ್ಸಾಹಿಗಳೂ ಒಣಗುತಿದ್ದಾರೆ," ಎಂದು ನಾನು ಕೂಡ ನಿರುತ್ಸಾಹದ ಮಾತನ್ನು ಸೂಚಿಸಿದೆನು.

## ೩. ನ್ಯಾಯಮೂರ್ತಿಯ ಸಂದರ್ಶನ

ವಿಶ್ವವಿದ್ಯಾಲಯದಲ್ಲಿ ಕಲಿಯುತಿದ್ದಾಗ ತರಗತಿಯಲ್ಲೊಮ್ಮೆ ಅಧ್ಯಾಪಕರು, ಹಾಜರುಪಟ್ಟಿಯ ಹಾಳೆಗಳನ್ನು ತೆರೆದು, "ಹಾಜರಿಲ್ಲದವರು ನಿಂತುಕೊಳ್ಳಿ," ಎಂದು ದಿನ ನಿತ್ಯದ ಸಹಸ್ರನಾಮ ಪಾರಾಯಣೆಯ ಭಾರವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದಾಗ, ಅಲ್ಲುಂಟಾದ ನಿಶ್ಶಬ್ದ, ಅದು ಅನಂತರ ಭೇದಿಸಲ್ಪಟ್ಟಾಗತಾನೆ ತಿಳಿದು ಬಂದಿತ್ತು. ಆ ಅಧ್ಯಾಪಕರೂ ನಾವು ವಿದ್ಯಾರ್ಥಿಗಳೂ ಎವೆಯಿಕ್ಕದೆ ಕೂತಿದ್ದು, ಒಂದು ನಿಮಿಷಕ್ಕೆ ಅನಿಮೇಷ ಸದೃಶರಾಗಿ ಬಿಟ್ಟಿದ್ದೆವು. ಮೆದುಳಿನ ಕ್ರಿಯೆಯು ತಟಸ್ಥವಾಗಿ ನಿಂತಿದ್ದು, ಇಂದ್ರಿಯಗಳ ಕಾರ್ಯವು ಉಡುಗಿ ಹೋಗಿತ್ತು. ನಾವು ನಮ್ಮನ್ನೆ ಮರೆತು ಬಿಟ್ಟಿದ್ದು, ಪೃಥಿವಿಯಿಂದ ನಾಲ್ಕಂಗುಲ ಮೇಲಾಗಿ ದ್ಯುಲೋಕಕ್ಕೆ ಸಮೀಪವಾಗಿದ್ದೆವು. ಅಂತಹ ಅವಸ್ಥೆಯೇ ಎಲ್ಲ ಕಾಲಕ್ಕೂ ನಮಗೆ ಸಂಪ್ರಾಪ್ತವಾಗಿ ಬಂದಿದ್ದರೆ, ಎವೆಯಿಕ್ಕದ ಮೀನುಗಳಂತೆ ನಾವೂ ಯಾರ ಯಾರ ಬಲೆಗೆ ಬೀಳುವಂತಾಗುತಿತ್ತಲ್ಲವೆ

ಎಂಬ ಅರಿವು ಈಗೇನೊ ಆಗುತ್ತಿದೆ; ಆ ಕಾಲಕ್ಕೆ ಅಂತಹ ಅರಿವು ನಮಗೆ ಬಂದಿದ್ದಿಲ್ಲ. ಅಂತೂ ಅಧ್ಯಾಪಕರ ಹುಸಿ ನಗುವಿನೊಡನೆ ತಾನೆ ನಿಶ್ಯಬ್ದ ಕೊನೆಯಾದಾಗ, ಆ ನಗುವಿನ ಬೆನ್ನಿನಲ್ಲಿಯೇ ವಿದ್ಯಾರ್ಥಿಗಳ ಅಟ್ಟಹಾಸವು ಹುಟ್ಟಿ ಕೋಲಾಹಲವಾಗಿ ಬಿಟ್ಟಿತ್ತು.

ಹಾಜರಿಲ್ಲದವರನ್ನು ನಿಲ್ಲ ಹೇಳಿದ ಅಧ್ಯಾಪಕರಂತೆ, ಮಂಗಳೂರಲ್ಲಿ ಕಾಣಸಿಗದ ನ್ಯಾಯಮೂರ್ತಿಯನ್ನು ಕುರಿತು ನಾನು ಹಂಬಲಿಸಿ ಏನು ಪ್ರಯೋಜನ? ಅವನೊಡನೆ ಸಮಾಗಮವನ್ನು ಇಚ್ಛಿಸಿ ಏನು ಪ್ರಯೋಜನವೆಂದು ಮನೆಯಿಂದ ಹೊರಟವನೆ, ಆಲೋಚನೆಗೆ ಪರವಶನಾಗಿ ಮುನ್ನಡೆದು ಹೋಗುತ್ತಿದ್ದೆನು. ರಾಜಮಾರ್ಗದಲ್ಲಿ ಬಸ್ಸುಗಳು ಓಡುತ್ತಿರಬಹುದು, ಸಾಯ್ಕಲುಗಳು ಹಾರುತ್ತಿರಬಹುದು, ಗಾಡಿಗಳು ನಾಗಾಲೋಡಿನಬಹುದು, ದಾರಿಹೋಕರು ನಟಸಟಾಯಿಸಬಹುದು. ಆದರೆ, ಅವುಗಳೆಲ್ಲದರ ತಲೆಗಳಲ್ಲಿ ಏನು ಸಂಚರಿಸುತ್ತದೆ, ಏನು ಕುಸ್ತಿ ಯಾಡುತ್ತಿದೆಯೆಂದು ಯಾರೂ ತಿಳಿಯದಷ್ಟೆ? ಹಾಗೆ ತಿಳಿದಷ್ಟೇ ಆದರೆ, ಸಾಯ್ಕಲಿನ ಚಕ್ರವು ಅಲ್ಲಲ್ಲೇ ತಿರುಗಿ ಮುಂದಕ್ಕೆ ಸಾಗದೆ ಇರುತಿತ್ತಲ್ಲವೆ? ಮೋಟರ್ ಬಂಡಿ ಅಲ್ಲಲ್ಲೆ ಘುಡುಘುಡಿಸುತ್ತಿರುತಿತ್ತಲ್ಲವೆ? ಬಂಡಿಯ ಕುದುರೆ ಹಿಂಗಾಲುಗಳಲ್ಲಿ ನಿಂತು ಭೀಕರಾಕಾರ ತಳೆಯುತಿತ್ತಲ್ಲವೆ? ನಾನಾಲೋಚಿಸಿ ಮುಂದಕ್ಕೆ ಹೋದಂತೆ ಬಂಡಿಗಳು,ಮೋಟರುಗಳು, ಸಾಯ್ಕಲುಗಳು ತಮ್ಮಷ್ಟಕ್ಕೆ ಸಾಗುತಿದ್ದವು. ಜನರೂ ತಮ್ಮಷ್ಟಕ್ಕೆ ಮುಂದರಿಯುತಿದ್ದರು.

ಬಾವಟೆಗುಡ್ಡೆಯ ಕವಿತೆಯ ಬುಗ್ಗೆ ಆಳಿದು ಹೋಗಿದೆಯೆಂದೂ ಡಬ್ಬಲ್ ಗುಡ್ಡೆಯ ನೆಳಲು ಬೆಳಕಿನ ದೃಶ್ಯಗಳು ಮಾಸಿ ಹೋಗಿವೆಯೆಂದೂ ನನಗೆ ತೋಚುತಿದ್ದುದು ಶುದ್ಧ ಅನ್ಯಾಯ. ಎಷ್ಟು ಜನರು ಬಂದು, ಸಾಯಂಕಾಲಗಳಲ್ಲಿ ಅಲ್ಲಿ ವಿಹರಿಸಿ ಕತ್ತಲು ಹರಿಯುವತನಕ ತಮ್ಮನ್ನು ತಾವೆ ಮರೆತುಬಿಡುವುದಿಲ್ಲ? ತಮ್ಮನ್ನು ತಾವೆ ಹಿಗ್ಗಿಸಿಕೊಳ್ಳುವುದಿಲ್ಲ? ತಮ್ಮನ್ನು ತಾವೆ ಬಗ್ಗಿಸಿಕೊಳ್ಳುವುದಿಲ್ಲ? ಕೋದಂಡನು ಅಲ್ಲಿಗೆ ಹೋದರು, ತನ್ನನ್ನೂ ಇತರರನ್ನೂ ಮರೆಯಲಾರನು. ಆದ್ದರಿಂದ ಆತನಿಗೆ ಅಲ್ಲಿ ಕಾವ್ಯ ಸ್ಫೂರ್ತಿ ತೋರುವುದಿಲ್ಲ. ಕಾವ್ಯಜೀವನ ಹರಿದು ಬರುವುದಿಲ್ಲ. ಮರೆಯಲಾರದವನಿಗೆ ಜೀವನವಿಲ್ಲ. ಹಿಂದಿನ ವಿದ್ಯಮಾನ್ಯಗಳನ್ನು ಮೆಲುಕಾಡುವವನು ಅವುಗಳಿಗೆ ಗುಲಾಮನು. ಆ ವಿದ್ಯಮಾನಗಳನ್ನು ಗೋಡೆಯಾಚೆ ದೂಡಿ ಮತ್ತೆ ಇದೆಲ್ಲದರ ಅನುಭವವನ್ನು ಚೀಪುವವನು ತಾನೆ ಸುಖಿ.

ಇಂತಿಷ್ಟನ್ನು ಹೆಣೆದುಕೊಂಡು ಹೋಗುತ್ತಿದ್ದಾಗ ನನ್ನ ಕಡೆಗೆ ಬೆನ್ನಿಟ್ಟು, ಮಾರ್ಗದ ಕಾಲ್ನಡೆಯಲ್ಲಿ ನಿಂತು, ಜೇಬಿನೊಳಗೆ ಏನನ್ನೋ ತುಂಬುತ್ತಿದ್ದ ಆಕೃತಿ ವಿಶೇಷವೊಂದು ನನ್ನ ಮನಸ್ಸನ್ನು ಸೆಳೆದುಕೊಂಡಿತು. ಅತ್ಯಾಧುನಿಕ ವಾದ ಉಡುಪನ್ನು ತೊಟ್ಟು, ಕೈಯಲ್ಲಿ ದಪ್ಪವೂ ಹಗುರವೂ ಆದ ಊರು ಗೋಲನ್ನು ಊರಿ ಕಡಲೆಪುರಿಯನ್ನೂ ಸಿಪ್ಪೆಯ ನೆಲಗಡಲೆಯನ್ನೂ ಜೇಬಿ ನೊಳಗೆ, ಆ ಕಡೆ ಈ ಕಡೆ ದಿಟ್ಟಿ ಹರಡುತ್ತ ತುಂಬುತ್ತಿರುವುದು ಅಸ್ವಾಭಾವಿಕ ವಾಗಿ ಕಂಡುಬಂದಿತು. ಆಗಲಿಕ್ಕೆ ಭವ್ಯವಾದ ಆಕೃತಿ, ನೋಡಲಿಕ್ಕೆ ವಿಚಿತ್ರ ವಾದ ದೃಶ್ಯ. ಇಲ್ಲದಿದ್ದರೆ, ಹಣ್ಣು ಮುದುಕಿಯೊಬ್ಬಳು ನೆಲದ ಮೇಲಿಟ್ಟ ಬುಟ್ಟಿಯಿಂದ ತನ್ನ ಕಿರುಪಾವಿನಲ್ಲಿ ತುಂಬಿಸಿ, ಆತನಿಗೆ ಕಡಲೆ ಪುರಿಯನ್ನು ಮಾರುವುದೆಂದರೇನು? ಎಂದು ಮುಂದಕ್ಕ ನಡೆದಾಗ, ಕೋದಂಡನು ಯಾರನ್ನು ಕಾಣಬೇಕು? ಹೇಟ್, ಬೂಟ್ ನೆಕ್‌ಟ್ಯಾ ಕ್ರೋಪಿನಲ್ಲಿ ನ್ಯಾಯ ಮೂರ್ತಿಯನ್ನಲ್ಲದೆ ಬೇರೆಯವನನ್ನು?

"ಭಲಾ, ಕೋದಂಡಾ!" ಎಂದಾತನು ಅನ್ನುವಾಗ, ನಾನು ನನ್ನನ್ನೇ ಮರೆತು ಬಿಟ್ಟಿದ್ದೆನು.

"ಬಹಳ ಕಾಲವಾಯ್ತಲ್ಲವೆ? ಬೊಂಬಾಯಿಗೆ ತೆರಳಿದವನು ಇಂದೇ ಬಂದಿರುತ್ತೇನೆ."

"ಕಪಿ ಸಂಘ ಚೆನ್ನಾಗಿದೆಯಲ್ಲವೆ? ಕಾಳಿದಾಸನು ಏನು ಮಾಡುತ್ತಿರು ವನು?" ಎಂದು ನ್ಯಾಯಮೂರ್ತಿ ಒಂದು ಮೈ ಚಲಕು ಹಿಂದಕ್ಕೆ ತೆಗೆದು ಕೇಳಿಬಿಟ್ಟನು.

"ನಾನು ಕೂಡ ಬಂದು ಕೆಲವೇ ದಿನವಾಗಿದೆ, ಒಂದೂ ತಿಳಿಯದು," ಎಂದು ತಟಸ್ಥನಾಗಿಯೆ ಹೇಳಿದೆನು.

"ಸರಿಯೆ, ಡಬ್ಬಲ್ ಗುಡ್ಡೆಗೆ ಹೋಗಲೆ?" ಎಂದು ನ್ಯಾಯಮೂರ್ತಿ ಯೊಂದೊಡನೆ, ಮಾತಿಗೆ ಮಾತು ಬೆಳೆಸಿ ಮುಂದಕ್ಕೆ ನಡೆದೆವು.

"ನೋಡು, ಕೋದಂಡಾ—ಆ ಮುದುಕಿಯ ನೆನಪಿದೆಯೆ?" ಎಂದು ಕೆಲ ಹೊತ್ತು ಸುಮ್ಮನಿದ್ದ ಮೂರ್ತಿ ಶೂನ್ಯದಿಂದ ಪೂರ್ಣಕ್ಕೆ ಹಾರಿದನು.

ನಾನು ಹಿಂತಿರುಗಿ ನೋಡಿದೆನು. "ಅಂದು ನಾವೆಲ್ಲ ಹತ್ತು ಪಾವು ಕಡಲೆ ಪುರಿ ಕೊಂಡು, ಪಾವಿನೊಳಗೆ ಅರ್ಧದ ವರೆಗೆ ತುರುಕಿಸಿಟ್ಟದ್ದು ಕಾಗದದ ಚೂರೆಂದು ಆಕ್ಷೇಪಿಸಿ, ಹೆದರಿಸಿ ಕಡೆಗೆ ಜೋಗಪ್ಪನು ಹಣ ಕೊಟ್ಟು ತೀರ್ಮಾನಿಸಿದ ಮುದುಕಿಯಲ್ಲವೆ ಅದು?"

"ಅಹುದು, ಕೂದಲು ನರೆತಿದೆ. ಮುಖದಲ್ಲಿ ನರೆಗಳು ಕೂಡಿವೆ. ಬೆನ್ನು ಗೂನಾಗಿದೆ."

"ನಾನದರ ನೆನಪು ಹುಟ್ಟಿಸಿದಾಗ ನಕ್ಕಳು ಮುದುಕಿ, ಕೋದಂಡಾ!"

"ನಕ್ಕಳಾ ತಾಯಿ, ಎನ್ನು."

"ಏಕೆ? ಏನಂದೆ?"

"ಮರೆತು ಹೋದೆಯಾ ಕನ್ನಡ! 'ನಕ್ಕಳಾ ತಾಯಿ' ಎಂಬ ಮಾತು ಕನ್ನಡದಲ್ಲಿ ಅಜರಾಮರವಾಗಿದೆ; ಶ್ರೀಯುವರ ಪದ್ಯ, ನ್ಯಾಯಮೂರ್ತಿ."

"ಏನೋ ಅನ್ನುವೆ! ಸರಿ, ಇಕೋ ಒಂದು ಮುಷ್ಟಿ ಕುಸ್ರಿ—ಎಂದು ಹೇಳಿ ಬಿಟ್ಟಳಾಕೆ."

"ಕುಸ್ರಿ ಎಂದಳೆ? ಅಂದಾಕೆ ಕುಸ್ರಿ ಕಡಲೆ ಪುರಿ ಇಲ್ಲವೆನ್ನುತಿದ್ದಳಲ್ಲವೆ? ಭೇಷಕ್, ಎಂತಹ ಅನ್ಯಾಯ ಮಾಡುತಿದ್ದೆವು, ನ್ಯಾಯಮೂರ್ತಿ, ಎಂತೆಂತಹ ಅನ್ಯಾಯ ಮಾಡಿದ್ದೇವೆ."

ನ್ಯಾಯ ಮೂರ್ತಿ ನಕ್ಕು ಬಿಟ್ಟು, ನನ್ನ ಬೆನ್ನಿನ ಮೇಲೆ ಥಟ್ಟೆಂದು ಕೈ ಹೊಡೆದು ಬಿಟ್ಟ.

ಡಬ್ಬಲ್ ಗುಡ್ಡೆಯಲ್ಲಿ ಕೂತಾಗ, ಕಳೆದುಹೋದ ದಿನಗಳ ನೆನಪು—ಸವಿನೆನಪು ಬಂದಿತು. ಎಲ್ಲಿಂದಲೋ ತಿರಿಗೊಮ್ಮೆ ಜೀವನದ ಸೌಂದರ್ಯ ಬಂದಂತಾಯಿತು. ನೆಳಲು ಬೆಳಕು ಕಾಣಿಸಿಕೊಂಡವು. ಏನೋ ಒಂದು ಬುಗ್ಗೆಯು ಹರಿಯ ತೊಡಗಿತು. ಸಮುದ್ರದಾಚೆಯಿಂದ ಏನೋ ಒಂದು ಸ್ಫೂರ್ತಿ ಬಂದಂತಾಯಿತು. ಯಾರೊಡನೆಯೂ ಹೇಳದೆ ಮುಂಬಯಿಗೆ ತೆರಳಿದ ನ್ಯಾಯಮೂರ್ತಿ ಅಲ್ಲಿ ಇಲ್ಲಿ ಎಂದು ಜೀವನಯಾಪನೆ ಗೈದು, ಕಡೆಗೆ ಜರ್ಮನ್ ಕಾರ್ಖಾನೆಯೊಂದರಲ್ಲಿ ಸೇರಿ, ಮಂಗಳೂರನ್ನೆ ಮರೆತು ಬಿಟ್ಟಿದ್ದನು.

"ಕವಿಸಂಘವನ್ನು ಮರೆತಿದ್ದೆಯಾ?" ಎಂದು ಪ್ರಶ್ನಿಸಿದೆನು. "ಎಂದೆಂದು ಜೀವನವು ಸಿನೇಮಾ ಪ್ರದರ್ಶನದಂತೆ ಸಂಕುಚಿತವಾಗಿ ತೋರುತಿತ್ತು, ಅಂದೆಂದು ಮಂಗಳೂರಿಗೆ ಹಾರಬೇಕೆಂದು ತೋರುತ್ತಿತ್ತು, ಹಾರಿಬಂದಿದ್ದೇನೆ," ಎಂದು ನ್ಯಾಯಮೂರ್ತಿ ಭುಜಗಳನ್ನು ಹಾರಿಸಿಬಿಟ್ಟನು.

ನಗರ ಸಭಾಸದರು ಮಾರ್ಗದ ಸಂದುಗೊಂದುಗಳಲ್ಲಿ ತಿಂಡಿ ತಿನಸು ಹಣ್ಣು ಹಂಪಲುಗಳನ್ನು ಮಾರದಂತೆ ಮಾಡುತ್ತಿರುವ ಪ್ರಯತ್ನದಲ್ಲಿ ಹಲವರ ಬೆಂಬಲವಿರುವಾಗ ಜರ್ಮನ್ ಕಾರ್ಖಾನೆಯ ನ್ಯಾಯಮೂರ್ತಿ ಕಡಲೆ

ಪುರಿಯನ್ನು ಮಾರ್ಗವಲ್ಲಿ ಕೊಂಡು, ಡಬ್ಬಲ್ ಗುಡ್ಡೆಗೆ ಬಂದು, ಕಿಸೆಯಿಂದ ಅದೆಲ್ಲವನ್ನು ತೆಗೆದು ತಿನ್ನುತ್ತಿರುವುದು ನನಗೆ ಚೋದ್ಯವಾಗಿ ಕಂಡು ಬರಲಿಲ್ಲ. ಆಫೀಸಿನಿಂದ ಬಂಡಿ ಹತ್ತಿ ಮನೆಗೆ ಹೋದವನು, ಮನೆಯಿಂದ ಬಂಡಿ ಹತ್ತಿ ಆಫೀಸಿಗೆ ಬಂದವನು--ಆ ಹಿಂದಿನ ಸಂತೋಷದ ಸವಿ ನೆನಪಿಗಾಗಿ ತಿರಿಗೊಮ್ಮೆ ಕಡಲೆಪುರಿಕೊಂಡು ಗುಡ್ಡೆಗೆ ಬಂದು ತಿನ್ನುತ್ತಿರುವನು. ಪ್ರಾಯಶಃ ಕೋದಂಡನ ಸವಾರಿ ಆ ಮಾರ್ಗವಾಗಿ ಬಾರದೇ ಇದ್ದಿದ್ದರೆ, ಒಂದೊಂದೇ ಕಡಲೆಪುರಿ ಮಾರ್ಗದ ಕಾಲ್ನಡೆಯಲ್ಲಿಯೇ ಆತನಿಗೆ ರುಚಿ ಹುಟ್ಟಿಸುತಿತ್ತೋ, ಏನೊ? ಹಾಗೆಂದೇ ನ್ಯಾಯ ಮೂರ್ತಿಯ ಭುಜದ ಮೇಲೆ ಕೈಯಿಟ್ಟು ಕೇಳಿದಾಗ—

"ಸಾಕಾಯ್ತು ಕಟ್ಟು ಕಟ್ಟಳೆಯ ಜೀವನ. ಅದಕ್ಕೆಲ್ಲ ವಿರಾಮವಿನ್ನು ಮಂಗಳೂರಿನಲ್ಲಿ. ಎದ್ದೊಡನೆ ನನಗೀಗ ತಾಯಿ ಗಂಜಿ ಬಡಿಸುತ್ತಾಳೆ. ನಾಳೆ ಎಣ್ಣೆ ಹಾಕಿ ಸ್ನಾನ ಮಾಡಬೇಕೆಂದಿದ್ದೇನೆ. ಎಲ್ಲವನ್ನೂ ನೋಡಿ ತಿರಿಗಿ ಹೋಗಬೇಕಾಗಿದೆ, ಕೋದಂಡ," ಎಂದು ನ್ಯಾಯ ಮೂರ್ತಿ ಹತ್ತಿಗಿಂತ ಹಗುರನಾಗಿ, ಹೂವಿಗಿಂತ ಮೆತ್ತಗಾಗಿ, ತುಂಬಿಗಿಂತ ಚಿಕ್ಕವನಾಗಿ, ಹೇಳಿಬಿಟ್ಟನು.

"ಅಗೋ ಅಲ್ಲಿ ಕಾಣುವುದೇನು?" ಎಂದು ನ್ಯಾಯ ಮೂರ್ತಿ ಬೆಸಿದ್ದಾಗ, ಎದುರು ಗುಡ್ಡೆಯಲ್ಲಿ ಯಾರೋ ಒಬ್ಬನು ಕೈಯಲ್ಲಿ ಬೆಂಕಿಯ ಸೂಡಿ ಹಿಡಿದು ನಡೆಯುತಿದ್ದನು.

## ೪. ಪುಂಡರೀಕನ ಇಜ್ಜೋಡು

ಪುಂಡರೀಕನೀಗ ಶಾಲೆಯ ಉಪಾಧ್ಯಾಯನಾಗಿದ್ದಾನೆ. ಶಾಲೆಯಲ್ಲಿ ಆತನು ಕೆಲವು ಕಾಲ ತರಗತಿಗಳಲ್ಲಿ ಗಣಿತವನ್ನು ಕಲಿಸುತಿದ್ದನು. ಆ ಸಮಯಕ್ಕೆ ಆತನು ಲೆಕ್ಕದ ಉಪಾಧ್ಯಾಯನಾಗಿದ್ದರೂ ಲೆಕ್ಕಕ್ಕೆ ಉಪಾಧ್ಯಾಯನಾಗಿದ್ದನೆಂದು ಹೇಳಲಾಗುವುದಿಲ್ಲ. ಎರಡು ಮತ್ತು ಎರಡು ನಾಲ್ಕಾಗಿದ್ದರೂ, ಐದೂ ಆಗ ಬಹುದೆಂಬ ತರದ ತತ್ವದ ವಾತಾವರಣದಲ್ಲಿ ಹುಟ್ಟಿ ಬೆಳೆದು ಬಂದ ಪುಂಡರೀಕನು ಲೆಕ್ಕವನ್ನು ಕಲಿಸಲು ಒಪ್ಪಿಕೊಂಡುದು ಚೋದ್ಯವೇ ಆಗಿದೆ.

ಪುಂಡರೀಕನು ವಿದ್ಯಾರ್ಥಿಯಾಗಿದ್ದಾಗ ನಡೆದ ಒಂದೆರಡು ವಿದ್ಯಮಾನಗಳನ್ನು ಇಲ್ಲಿ ನಿರೂಪಿಸುವುದು ಸೂಕ್ತವಾಗಬಹುದು. ಗಣಿತದ ಮೊದ

ಲನೆ ಪಾಠ ಪ್ರವಚನದಲ್ಲಿ ಉಪಾಧ್ಯಾಯರು ಒಂದು ಕೈಯಲ್ಲಿ ಚೇಡಿ ತುಂಡನ್ನು ಇನ್ನೊಂದು ಕೈಯಲ್ಲಿ ರೇಖಾಗಣಿತದ ಉಪಕರಣವನ್ನು ಹಿಡಿದು ಕೊಂಡಿದ್ದು, "ಒಂದು ನೆಟ್ಟಗಾದ ರೇಖೆಯ ಮೇಲೆ ಇನ್ನೊಂದು ನೆಟ್ಟಗಿನ ರೇಖೆ ನಿಂತರೆ, ಆಗ ಅಲ್ಲಿ ಎರಡು ಸಮಕೋಣಗಳು ಆಗುತ್ತವೆ," ಎಂದು ಹೇಳುತ್ತ ಬೋರ್ಡಿನ ಮೇಲೆ ಏನನ್ನೋ ಗೀಚಿದಾಗ, "ಹಾಗೆ ಆ ರೇಖೆಗಳು ಒಂದರ ಮೇಲೆ ಇನ್ನೊಂದು ನಿಂತ ಪಕ್ಷಕ್ಕೆ ರೇಖೆಯೇ ದೀರ್ಘವಾಗುತ್ತ ದಲ್ಲದೆ, ಸಮ ಕೋಣಗಳನ್ನು ಮಾಡಿ ಕೊಡುವುದಿಲ್ಲ"ವೆಂದು ಪುಂಡರೀಕ ನೆಂದಾಗ, ಉಪಾಧ್ಯಾಯರು ನಕ್ಕು, "ನೀನೊಬ್ಬ ದೊಡ್ಡ ಗಣಿತ ಶಾಸ್ತ್ರಿ ಯಾಗಲಿರುವೆ"ಯೆಂದು ಹಾಸ್ಯಕ್ಕೆ ನುಡಿದು ನಿಂತಿದ್ದರು. ಮರುದಿವಸ ಪುಂಡ ರೀಕನು ಮಾತ್ರ ಗಣಿತ ವಿಭಾಗದಿಂದ ಕಾಣೆಯಾಗಿ ಬಿಟ್ಟು, ಕೌರವ ಪಾಂಡ ವರ ಕುರುಕ್ಷೇತ್ರವು ಅಫಗಾನ್ ಮರಾಟರ ಪಾಣಿಪತವಾಗಿ ಅವಸ್ಥಾಂತರ ಗೊಳ್ಳುವ ಚರಿತ್ರೆಯ ವಿದ್ಯಾರ್ಥಿಯಾಗಿದ್ದನು ಎಂದು ಅವನನ್ನು ಹೊಗಳಿ ಬಿಟ್ಟ ಉಪಾಧ್ಯಾಯರಿಗೂ ತಿಳಿಯದೆ ಇರಲಿಲ್ಲ.

ಪುಂಡರೀಕನನ್ನು ವಿಚಾರಿಸಿದಾಗ ಅವನು ಹೇಳಿದ ಮಾತು ಸ್ವಾರಸ್ಯ ವಾಗಿತ್ತು. "ನಾನು ಶಾಲೆಯಲ್ಲಿ ಕಲಿಸುವುದು ಕಡಿಮೆ; ಹುಡಗರೆ ನನಗೆ ಕಲಿಸುತಿದ್ದಾರೆ." ಆದರೆ ಈ ಮಾತಿನ ನಿಜವಾದ ಅರ್ಥಗಾಂಭೀರ್ಯವು ಉಪಾಧ್ಯಾಯನಾಗಿರದ ಕೋದಂಡನಿಗೆ ತಿಳಿಯಲಾರದು; ನಿಮಗಂತೂ ತಿಳಿಯಲು ಅಸಾಧ್ಯವಷ್ಟೆ? ಮನುಷ್ಯನಾದವನು ಯಾವಾಗಲೂ ವಿದ್ಯಾರ್ಥಿ, ಸೃಷ್ಟಿಯೇ ಒಂದು ವಿಶ್ವ ವಿದ್ಯಾಲಯ ಎಂಬುದೆಲ್ಲ ದೊಡ್ಡ ದೊಡ್ಡ ಮಾತು. ಅವರ ಭಾವ, ಅರ್ಥ, ಅಭಿಯೋಗ ಇವೆಲ್ಲ ವಾಚಾತೀತವಾಗಿವೆ.

ಆದರೆ, ಪುಂಡರೀಕನು ಲೆಕ್ಕದ ಪಾಠವೊಂದನ್ನು ಊರಿನ ಪೇಟೆ ಯಲ್ಲೊಮ್ಮೆ ಚೆನ್ನಾಗಿ, ಯಾವಾಗಲೂ ಮರೆಯಲಾರದಷ್ಟು ಚೆನ್ನಾಗಿ ಕಲಿ ತಿದ್ದನಂತೆ. ಆ ಕತೆಯೂ ಸ್ವಾರಸ್ಯವಾಗಿದೆ. ಉಪಾಧ್ಯಾಯನಾದ ನಂತರ ಪುಂಡರೀಕನೊಮ್ಮೆ ಸಂತೆಗೆ ಏನೊ ಕಾಯಿಪಲ್ಯ ತರಲು ಹೋಗಿದ್ದನು. ಹಾಗೆ ಆತನು ಪೇಟೆಗೆ ಹೋದುದು ಅದೇ ಮೊದಲು; ಪ್ರಾಯಶಃ ಅದೇ ಕಡೆಯದು. ಅಂದರೆ ಪುಂಡರೀಕನು ಮನೆಗೆ ಊಟಕ್ಕೆ ಮಾತ್ರ ಹೋಗು ವಂತಹುದು. ಆ ಊಟಕ್ಕೆ ಬೇಕಾದ ಅಕ್ಕಿ ಕಾಯಿ ಪಲ್ಯ ಸಂಬಾರು ಎಲ್ಲಿಂದ ಬರುತ್ತದೆ, ಯಾರು ತರುತ್ತಾರೆ ಅದೊಂದೂ ಆತನಿಗೆ ಗೊತ್ತಿರುವುದಿಲ್ಲ.

ಹಾಗೆಂದು ಒಮ್ಮೆ ನಾನು ಪುಂಡರೀಕನೊಡನೆ, "ಪುಂಡರೀಕ, ತರಗತಿಯಲ್ಲಿ ಸಮಸ್ಯೆಗಳನ್ನು ಕೊಟ್ಟಾಗ ಮುಡಿಯೊಂದಕ್ಕೆ ನಾಲ್ವತ್ತರ ಪ್ರಕಾರದ ಅಕ್ಕಿ, ಸೇರಿಗೆ ರೂಪಾಯಿ ನಾಲ್ಕರ ಪ್ರಕಾರ ಸಾಸಿವೆಯ ಲೆಕ್ಕ ಕೊಟ್ಟಿದೆಯಾ?" ಎಂದೆಂದಾಗ, "ಹಾಳಾಯ್ತು, ನಿನ್ನ ಲೆಕ್ಕ," ಎಂದಾತನು ಒಮ್ಮೆ ನಕ್ಕು ಬಿಟ್ಟಿದ್ದನು.

ಸಂತೆಗೆ ಹೋದ ಪುಂಡರೀಕನು ಸಂತೆಯ ಈ ಕಡೆಯಿಂದ ಆ ಕಡೆಗೆ ಆ ಕಡೆಯಿಂದ ಈ ಕಡೆಗೆ ಗ್ರಾಹಕರ ನಡುವಿಂದ ಒಂದು ಡಬ್ಬಲ್ ನಡೆಯನ್ನು ಚಡಾಯಿಸಿ, ಕಡೆಗೆ ಸಂತೆಯ ಗೇಟಿನ ಬಳಿಯಲ್ಲಿಯೆ ಕುಳಿತ ಒಬ್ಬಾಕೆಯೊಡನೆ, "ಇದರ ಕ್ರಯವೇನೆ"ಂದು ಕೇಳಿ ಬಿಟ್ಟನು.

ಪಡುವಲಕಾಯನ್ನು ಕೈಯಲ್ಲೆತ್ತಿ ಆಕೆ, "ಹತ್ತು ಕಾಸು," ಎಂದಳು. "ಐದು ತಾರಕ್ಕೆ ಕೊಡುವಿಯಾದರೆ ಕೊಟ್ಟು ಬಿಡು," ಎಂದು ಪುಂಡರೀಕನು ಬೇಡಿದಾಗ ತರಕಾರಿಗಿತ್ತಿ ಮರುಮಾತಿಲ್ಲದೆ ಪಡುವಲಕಾಯನ್ನು ಮಾರಿಕೊಂಡೇ ತೀರಿದಳು.

ಆದರೆ, ಐದು ತಾರುಗಳು ಎಂದರೆ ಹತ್ತು ಕಾಸಿನ ಅರ್ಧವಲ್ಲ, ದುಬಾರಿಯೆಂದು ಪುಂಡರೀಕನಿಗೆ ಹೇಗೆ ಗೊತ್ತು? ಹತ್ತರ ಅರ್ಧ ಐದು ತಾನೆ? ಮನೆ ಸೇರಿದಾಗ ತನಗೆ ಪೇಟೆಯಲ್ಲಿ ಮರೆಯಲಾರದ ಲೆಕ್ಕದ ಪಾಠ ಸಿಕ್ಕಿತೆಂದು ಪುಂಡರೀಕನಿಗೂ ಗೊತ್ತಾಗಿ ಬಿಟ್ಟಿತು.

ಅಂತಹ ಪುಂಡರೀಕನೊಮ್ಮೆ ತರಗತಿಯಲ್ಲಿ ಪಾಠವನ್ನು ಮಾಡುವಾಗ ನಕ್ಕೇ ಬಿಟ್ಟನು. ನಗುವನ್ನು ತಡೆಯಲಾರದೆ ನಕ್ಕೇ ಬಿಟ್ಟನು. ಎದುರು ಬದಿರಾಗಿ ಬರುವ ರೈಲ್ವೆ ಬಂಡಿಗಳು ಒಂದನ್ನು ಇನ್ನೊಂದು ಎಷ್ಟು ಹೊತ್ತಿನೊಳಗೆ ದಾಟಿ ಹೋಗುತ್ತಿದೆಯೆಂಬ ಸಮಸ್ಯೆಯನ್ನು ವಿದ್ಯಾರ್ಥಿಗಳಿಗೆ ಬರೆಸಿ ಕೊಟ್ಟಾಗ, ತಾನು ಹಿಂದೆ ಅಂತಹ ರೈಲ್ವೆ ಬಂಡಿಗಳು ಡಿಕ್ಕಿ ಹೊಡೆದೇ ಹೋಗುತ್ತವೆ, ಸುಟ್ಟು ಮುರಿದು ಹೋಗುತ್ತಿವೆ ಎಂದು ಪರೀಕ್ಷೆಯ ಪತ್ರದಲ್ಲಿ ಉತ್ತರ ಬರೆದುದನ್ನು ನೆನೆದು ನಕ್ಕು ಬಿಟ್ಟನು. ರೈಲ್ವೆ ಬಂಡಿಗಳನ್ನೂ ಅವುಗಳ ಕಂಬಿಗಳನ್ನೂ ಚೆನ್ನಾಗಿ ಅರಿತುಕೊಂಡ ಲೆಕ್ಕದ ಕರ್ತನಿಗೆ ವಿದ್ಯಾರ್ಥಿಗಳ ತೊಡಕು ಏನು ಗೊತ್ತಾಗಬೇಕು? ಆದುದರಿಂದ ಪುಂಡರೀಕನು ಆ ಲೆಕ್ಕವನ್ನೆ ಆ ತರಗತಿಯಲ್ಲಿ ಆ ವರ್ಷ ಕಲಿಸಲಿಲ್ಲವಂತೆ! ಒಂದಾಣೆಗೆ ಐದು ಬಾಳೆ ಹಣ್ಣಾದರೆ, ಐದು ಬಾಳೆ ಹಣ್ಣಿಗೆ ಎಷ್ಟು ಆಣೆ ಎಂಬ ಪ್ರಶ್ನೆಗೆ

ಉತ್ತರ ಕೊಡುವಾಗ ತಪ್ಪಿ ಬೀಳುವ ವಿದ್ಯಾರ್ಥಿಗಳಿಗೆ, ಡಿಕ್ಕಿ ಹೊಡೆದು ಸುಟ್ಟು ಮುರಿದೋ ಮುರಿದು ಸುಟ್ಟೋ ಬೀಳುವಷ್ಟು ವೇಗದಿಂದ ಬಂಡಿಗಳನ್ನು ನಡೆದೋಡಿಸಿ, ಒಂದು ಇನ್ನೊಂದನ್ನು ದಾಟಿ ಹೋಗಿಸುವಂತಾಗಿ ಮಾಡಿ ರೈಲ್ವೆ ಪ್ರಯಾಣ ಮಾಡಿರದ ವಿದ್ಯಾರ್ಥಿಗಳ ಪ್ಪೈಮೇಲೆ, ತಲೆಯ ಮೇಲೆ ಆ ರೈಲ್ವೆ ಸಮಸ್ಯೆಗಳನ್ನು ಏಕೆ ಓಡಿಸಬೇಕು? ಮುಖ್ಯವಾಗಿ ಕಲಿಸುವವನಿಗೆ ಏನೋ ಕಲಿಸಬೇಕು; ಕಲಿಯುವವರು ಏನೋ ಕಲಿಯಬೇಕಾಗಿದೆ.

ಹೀಗೆಯೇ, ಒಮ್ಮೆ ತಮಾಷೆಗಾಗಿ ಪುಂಡರೀಕನನ್ನು ನಾನು ಪ್ರಶ್ನಿಸಿದೆನು, "ನೀನು ಕಲಿಸುವ ಲೆಕ್ಕ ಏನಾದರೂ ಪ್ರಯೋಜನವೆ?" ಎಂದು. ಪುಂಡರೀಕನು ಕೆಲ ಹೊತ್ತು ನಿರುತ್ತರವಿದ್ದು, ಮತ್ತೆ ಅಂದನು.

"ಕಳೆದ ವರ್ಷ ನಮ್ಮ ಶಾಲೆಯಲ್ಲಿ ಸೊನ್ನೆಯಷ್ಟು ಮಾರ್ಕುಗಳಿಗಿಂತ ಒಂದು ಹೆಚ್ಚು ಸಿಕ್ಕಿದ ವಿದ್ಯಾರ್ಥಿ ಹೇಗೆ ಬುದ್ಧಿವಂತಿಕೆಯಲ್ಲಿ ತೇರ್ಗಡೆ ಹೊಂದಿದನೆಂದು ಹೇಳುತ್ತೇನೆ. ಬೇಂಕಿನಲ್ಲಿ ಚಾಕರಿ ಬೇಡಿದಾಗ, ಒಂದು ಸಮಸ್ಯೆ ಆತನು ಬಿಡಿಸಬೇಕಾಯಿತು–"ಏಜಂಟನು ಒಳಗೆ ಮಲಗಿದ್ದಾನೆ–ಟಿಜೋರಿಯ ಬೀಗದ ಕೈ ಹೊರಗೆ ಜಗಲಿಯಲ್ಲಿ. ಮಾಡಿನ ಹಂಚು ಇದ್ದ ಹಾಗೆ. ಟಿಜೋರಿಯಲ್ಲಿ ಐದು ಸಾವಿರ ಕಾಣೆ, ಯಾರು ಹೊಣೆ?"

ಅದಕ್ಕುತ್ತರ—ಏಜಂಟು ಹೊಣೆ.

"ಏತಕ್ಕೆ?"

"ಒಳಗೆ ಮಲಗಿದ ಏಜಂಟನ ಬೀಗದ ಕೈ ಜಗಲಿಯಲ್ಲಿ ಹೇಗೆ ಬಂತು? ಬಾಗಿಲಿಗೆ ಕೀಲಿಯಿದೆ, ಮಾಡಿಗೆ ಹಂಚಿದೆ, ಬೀಗದ ಕೈ ಏಜಂಟನ ಕೈಯಲ್ಲಿ ಏಕೆಯಿಲ್ಲ?"

ಆ ವಿದ್ಯಾರ್ಥಿ ಕೆಲಸಕ್ಕೆ ನಿಯಮಿಸಲ್ಪಟ್ಟನು. ನಾವು ಕೊಟ್ಟ ಉದ್ದುದ್ದ ಸಮಸ್ಯೆಗಳಲ್ಲಿ ಒಂದು ಮಾರ್ಕಿನ ಯೋಗ್ಯತೆ ಪಡೆದು, "ಕಿಟ್ಟು ನಿನಗೆಷ್ಟು ಮಾರ್ಕು?" ಎಂದಾಗ "ರಾಮುವಿಗಿಂತ ಒಂದು ಮಾರ್ಕು ಹೆಚ್ಚು, ಸಾರ್" ಎಂದುತ್ತರ ಕೊಟ್ಟ ವಿದ್ಯಾರ್ಥಿಯು ಬೇಂಕ್ ಡಿರೆಕ್ಟರರ ಪರೀಕ್ಷೆಯಲ್ಲಿ ತೇರ್ಗಡೆಯಾದುದು ಆಶ್ಚರ್ಯವೆ?

"ರಾಮು, ನಿನಗೆಷ್ಟು ಮಾರ್ಕು ಬಂತುಕಣೊ" ಎಂದರೆ, "ನೆನಪಿಲ್ಲ ಸಾರ್" ಎಂದುತ್ತರ ಬಂತು.

"ನೆನಪು ಹುಟ್ಟಿಸೊ ರಾಮು!, ಎಷ್ಟು ಮಾರ್ಕು ಬಂತು?" ಎಂದು ತಿರುಗಿ ಬಲವಂತ ಮಾಡಿತು.

"ಕಿಟ್ಟುವಿಗಿಂತ ಒಂದು ಕಮ್ಮಿ ಸಾರ್"ಎಂಬ ಚಿಕ್ಕ ಉತ್ತರ ಬಂದಿತು. ಕಿಟ್ಟುವಿನ ಆಪ್ರತ್ಯುತ್ಪನ್ನಮತಿತ್ವ ಆ ಕಾಲ ಹೊಳೆಯುಲಿಲ್ಲ. ಅವನು ಬೇಂಕ್ ಪರೀಕ್ಷೆಯಲ್ಲಿ ತೇರ್ಗಡೆಯಾದಾಗ ತಾನೆ ಸ್ಫುಟವಾಗಿ ಎದ್ದು ಬಂದಿತು.

ನಮ್ಮ ಶಾಲೆಗಳಲ್ಲಿ ಮುಖ್ಯವಾಗಿ ನಾವು ವಿದ್ಯಾರ್ಥಿಗಳ ಊಹನಾ ಬಲ, ಸೃಜನಾತ್ಮಕ ಶಕ್ತಿ—ಎಲ್ಲವನ್ನು ಅಚ್ಚುಗಟ್ಟಾದ ವಿದ್ಯಾಭ್ಯಾಸದ ಕ್ರಮದೊಳಗೆ ಬಲಿಕೊಡುತಿದ್ದೇವೆ. ಅಲ್ಲ ಸಲ್ಲದ—ಜೀವನಕ್ಕೆ ಸಂಬಂಧವಿರದ —ವ್ಯವಹಾರಕ್ಕೆ ಪ್ರಯೋಜನವಿರದ ಸಂಗತಿಗಳನ್ನು ಕಲಿಸುತ್ತೇವೆ. ಹೆಮ್ಮೆ ಯನ್ನು ಹೆಚ್ಚಿಸಿಕೊಳ್ಳುತ್ತೇವೆ."

ಗಣಿತ ಶಾಸ್ತ್ರಿಯಾಗಲಿದ್ದು, ಹಾಗೆ ಆಗವ ಪುಂಡರೀಕನ ತರಗತಿಯು ಲೊಮ್ಮೆ ಕೊಟ್ಟ ಸಮಸ್ಯೆಗೊಂದು ಆಕ್ಷೇಪವನ್ನು ಒಬ್ಬನು ಎತ್ತಿಯೇ ಬಿಟ್ಟಿ ದ್ದನು. ಒಬ್ಬ ವ್ಯಾಪಾರಿ ಎರಡು ತರದ ಕಾಫಿ ಬೀಜಗಳನ್ನು ಬೆರಕೆ ಮಾಡಿ ಮಾರುತಿದ್ದನು. ಆದ್ದರಿಂದ ಆತನಿಗೆ ಲಾಭಾಂಶ ಹೆಚ್ಚುತಿತ್ತು. ಒಬ್ಬಾಕೆ, ಹಾಲಿಗೆ ನೀರನ್ನೋ ನೀರಿಗೆ ಹಾಲನ್ನೊ ಸೇರಿಸಿ ವ್ಯಾಪಾರಿಸುತಿದ್ದಳು. "ಆದರೆ ಸಾರ್ ಹಾಗೆ ಮಾಡುವುದು ತಪ್ಪು, ಶುದ್ಧ ಅನ್ಯಾಯ, ಲಾಭ ಸಿಕ್ಕಿದರೂ ಅದು ಲಾಭವಲ್ಲ, ಅದು ವಂಚನೆಯ ದ್ರವ್ಯ", ಎಂದು ಒಬ್ಬ ವಿದ್ಯಾರ್ಥಿ ಹೇಳಿಯೆ ಬಿಟ್ಟಿದ್ದನು. ಪುಂಡರೀಕನು ಒಮ್ಮೆಗೆ ವಿದ್ಯಾರ್ಥಿಯನ್ನು ಇನ್ನೊಮ್ಮೆಗೆ ತನ್ನ ಕೋಟಿನ ಜೇಬನ್ನು ನೋಡಿಕೊಂಡು, ಮುಖದ ಒಂದು ಭಾಗವನ್ನು ಆ ಕಡೆಯ ಕಣ್ಣಿನೊಡನೆ ಜೋಲು ಬಿಟ್ಟು, ಕೈಯೊಳಗಿನ ಜೇಡಿನ ತುಂಡನ್ನು ಕೆಳಗೆ ಚೆಲ್ಲಿಕೊಟ್ಟು "ಏನಪ್ಪಾ, ಕರ್ಕರಾ, ಇದು ಲೆಕ್ಕದ ಪಾಠವಲ್ಲವೆ?" ಎಂದು ಮೆಲ್ಲನೆ ಉಸುರಿದನು. ಮತ್ತೆ,

"ಬರೆದು ಕೊಳ್ಳಿ, ಒಂದು ಬಿಸಿ ನೀರಿರುವ ಪೀಪಾಯಿಯಿಂದ ಆ ಬಿಸಿ ನೀರು ಒಂದು ಕೊಳವೆಯ ಮಾರ್ಗವಾಗಿ ಮಿನಿಟಗೆ ಇಂತಿಷ್ಟು ವೇಗದಲ್ಲಿ ಹೊರ ಹೋಗುವಾಗ, ಇನ್ನೊಂದು ಕೊಳವೆಯಿಂದ ತಣ್ಣೀರು ಮಿನಿಟಗೆ ಇಂತಿಷ್ಟು ವೇಗದಲ್ಲಿ ಒಳ ಬರುವುದಾದರೆ ಪೀಪಾಯಿಯಲ್ಲಿ ಎಷ್ಟು ಸಮಯ ದಲ್ಲಿ ಬಿಸಿ ನೀರು ಖಾಲಿಯಾಗಿ ತಣ್ಣೀರು ತುಂಬುವುದು?" ಎಂದು ದೊಡ್ಡ ಸಮಸ್ಯೆಯನ್ನು ಎದುರಿಟ್ಟು ಬಿಟ್ಟನು.

ತರಗತಿಯು ಕಿಟ್ಟು ಬರೆದುಕೊಂಡ ಸಮಸ್ಯೆ ಮುಗಿವ ಮುನ್ನವೆ, ಎದ್ದು ನಿಂತನು.

"ಸಾರ್, ನಾಳೆ ನಮ್ಮಲ್ಲಿ ಊಟಕ್ಕೆ ಬರಬೇಕೆಂದು ತಂದೆ ಹೇಳಿದ್ದಾರೆ,

ಸಾರ್,'' ಎಂದು ಹಲ್ಲುಗಳ ಕಿರಣಗಳನ್ನು ಕ್ಲಾಸಿನಲ್ಲೆಲ್ಲ ಹರಡಿಸಿದನು ಕಿಟ್ಟು.

ಸಮಸ್ಯೆ ಕೊಟ್ಟ ಪುಂಡರೀಕನಿಗೆ ಅದೇ ಸಮಸ್ಯೆಯಾಗಿ ಬಿಟ್ಟಿತು.

"ಏನು ಕಿಟ್ಟು? ಲೆಕ್ಕ ಬರೆದುಕೊಂಡಿಲ್ಲವೆ? ಊಟಕ್ಕೂ ಲೆಕ್ಕಕ್ಕೂ ಏನು ಗಂಟು?'' ಎಂದು ಪುಂಡರೀಕನು ಗದರಿಸಿದಾಗ, ಕಿಟ್ಟುವಿನ ಹಲ್ಲುಗಳ ಕಿರಣ, ತುಟಿಗಳ ಒಳಗೆ ಕಡಿದು ಹೋಯಿತು. ಆತನು ಹೌಹಾರಿ, ಕಣ್ಣು ಗಳನ್ನು ತೀವ್ರ ಮಾಡಿ, ಬೆಂಚಿನಲ್ಲಿ ಕೂತು, ಆ ಕಡೆ ಈ ಕಡೆ ಏನೋ ನೋಡಿ ಪುಸ್ತಕದಲ್ಲಿ ಏನೋ ಗೀಚಿ ಸುಮ್ಮಗಾದನು.

ಪುಂಡರೀಕನೀಗ ಶಾಲೆಯಲ್ಲಿ ಲೆಕ್ಕವನ್ನು ಕಲಿಸುವುದಿಲ್ಲ.

## ೫. ಗೇರು ಹಣ್ಣಿನ ಶಿಕಾರಿ

ಆ ಆದಿತ್ಯವಾರ ದಿನ ಸಾಧಾರಣ ನಾಲ್ಕು ಗಂಟೆಯ ಹೊತ್ತಿಗೆ ಪುಂಡ ರೀಕನೊಡನೆ ತಿರುಗಾಟಕ್ಕೆ ಹೊರಟೆನು. ಮಾರ್ಗದಲ್ಲಿ ಹೋಗುತಿದ್ದಾಗ ಯಾವ ಯಾವ ವಿಚಾರವನ್ನು ಕುರಿತು ಪ್ರಸ್ತಾವ ಮಾಡುತಿದ್ದೆವೆಂದು ನನ ಗೀಗ ನೆನಪಿರುವುದಿಲ್ಲ ಇಂದು ಮಧ್ಯಾಹ್ನದ ಊಟಕ್ಕೇನು ಪಲ್ಯವೆಂದರೆ, ನಿಮಗೆ ಹೇಳಲು ಸಾಧ್ಯವಾಗಬಹುದು. ಆದರೆ, ನಿನ್ನೆಯ ರಾತ್ರೆ ಏನು ಪಲ್ಯ? ನಿನ್ನೆ ಮಧ್ಯಾಹ್ನವೇನು ಪಲ್ಯ? ನಿನ್ನೆ ಬೆಳಿಗ್ಗೆ ಎಂಟು ಗಂಟೆಗೆ ನೀವು ಎಲ್ಲಿ ದ್ದಿರಿ?—ಹೇಳಲು ಸಾಧ್ಯವಿದೆಯೆ? ಇರುವುದಿಲ್ಲವಷ್ಟೆ? ಅಂದಿನ ಸಾಯಂ ಕಾಲದಲ್ಲಿ ಮತ್ತೆ ನಮಗೇನು ವಿಶೇಷ ಸಂಗತಿಗಳು ನಡೆದು ಹೋದುವೊ ಅವುಗಳ ಉಪಲಕ್ಷ್ಯದಲ್ಲಿ ನಾವು ಮಾತನಾಡಿದ ಸಂಗತಿಗಳನ್ನು ನೆನಪಿನ ಗುಹೆಗಳಿಂದ ಆಯ್ದು ಹೇಳುವುದು ಅಗತ್ಯವೆಂದೇನೋ ಒಪ್ಪುತಿದ್ದೇನೆ. ಆದರೆ, ಎಂದೆಂದಿನ ಆದಿತ್ಯವಾರಗಳಂತೆ ಆ ಆದಿತ್ಯವಾರವೂ ಕೂಡ ಒಂದು ಸಾಮಾನ್ಯ ದಿನವಾಗಿ ಹೋಗುವುದರಲ್ಲಿದ್ದುದರಿಂದ ಮಾತನಾಡಿದ ಸಂಗತಿಯನ್ನು ನಾನು ನೆನಪಿಟ್ಟುಕೊಂಡಿಲ್ಲ. ಎಲ್ಲವನ್ನೂ ನೆನಪಿಟ್ಟುಕೊಳ್ಳುವುದಾದರೆ, ನಡೆದ ಪ್ರತಿ ಯೊಂದು ಅನುಭವವನ್ನೂ ಮುದುಳಿನಲ್ಲಿಟ್ಟುಕೊಳ್ಳುವುದಾದರೆ, ಈ ಚಿಕ್ಕ ತಲೆಯುರುಟು ಸಾಕಾಗಬಹುದೆ? ಮರೆತು ಬಿಡಬೇಕು; ಜೀವನವು ಸುಗಮ ವಾಗುತ್ತದೆ. ಸವಿನೆನಪು ನೆನೆಯುಕೊಳ್ಳಬೇಕು; ಜೀವನವು ಮಧುರವಾಗುತ್ತದೆ.

ನಾನಂದು ಸಾಯಂಕಾಲ ತಿರುಗಾಟ ಮಾಡಿ ಹೋದುದು ಕದಿರೆಯ ಗುಡ್ಡೆಯಾಚೆ. ಕದಿರೆಯ ಗುಡ್ಡೆಯ ಮೇಲೆ ನಿಂತು ನೋಡಿದಾಗ ಕೆಳಗೆ ತಪ್ಪಲಿನಲ್ಲಿ ತೋಟ ಕಂಡುಬಂದುದು ಗೇರು ಮರಗಳದ್ದಾಗಿತ್ತು. ಕದಿರೆಗೆ

ಸಮೀಪದಲ್ಲಿ 'ಬಾಳೆಬೈಲು' ಎಂಬ ಗ್ರಾಮವಿರುವುದರಿಂದ 'ಕದಿರೆ' ಎಂಬ ಶಬ್ದ ಸಂಸ್ಕೃತದ 'ಕದಳಿ'ಯೆಂಬ ಶಬ್ದದಿಂದ ಹುಟ್ಟಿ ಬಂದು—ಒಂದಾನೊಂದು ಕಾಲದಲ್ಲಿ ಕದಿರೆಯ ತಪ್ಪಲಿನಲ್ಲಿ (ಗುಡ್ಡದಲ್ಲೆಲ್ಲ) ಬಾಳೆಯ ತೋಟಗಳು ಇದ್ದಿರಬೇಕೆಂದು ಚರಿತ್ರಕಾರರೇನೋ ಉದ್ದುದ್ದದ ಸಂಶೋಧನೆಗಳನ್ನು ಮಾಡಿ, ಶಬ್ದಗಳಲ್ಲಿ ಸರ್ಕಸ್ಸನ್ನು ಮಾಡಿರಬಹುದು. ಆದರೆ, ಅವರು ಅಂತಹ ಸರ್ಕಸ್ಸುಗಳನ್ನು ಮಾಡುವುದರ ಬದಲು, ಕೈಯಲ್ಲಿ ಹಾರೆಪಿಕ್ಕಾಸುಗಳನ್ನು ಹಿಡಿದು ನೆಲವನ್ನು ಅಗೆದು—ಕೆಳಕೆಳಗೆ ಭೂಮಿಯ ಅಡಿಯಲ್ಲಿ ಬಾಳೆಗಿಡಗಳ ಬೇರುಗಳನ್ನಾಗಲಿ, ಅವುಗಳ ಇತರ ಅವಶೇಷಗಳನ್ನಾಗಲಿ, ಬಾಳೆಗಿಡದ ಕೃಷಿಗೆ ಉಪಯುಕ್ತವಾದ ಬುಟ್ಟಿಗಿಟ್ಟಿ ಮೊದಲಾದ ಉಪಕರಣಗಳ ಚಿಹ್ನೆಗಳನ್ನಾಗಲಿ ಕಂಡುಹಿಡಿದು ತಮ್ಮ ಸಂಶೋಧನೆಗೆ ಬಲವಾದ ಆಧಾರಗಳನ್ನು ಏಕೆ ಕೊಡುತ್ತಿಲ್ಲವೆಂದು ನಾವಿಬ್ಬರೂ ಆಶ್ಚರ್ಯಪಟ್ಟೆವು. ಇಲ್ಲಿ ಬಾಳೆಯ ತೋಟವೀಗ ಕಾಣುವುದಿಲ್ಲ; ಅದರ ಬದಲಿಗೆ ಕಾಣುವುದು ಗೇರುಹಣ್ಣಿನ ತೋಟ. ಗೇರಿನ ಮರಗಳಲ್ಲಿ ಕಾಣುವುದು ಎಲೆಗಳೂ ಹೂವುಗಳೂ ಮತ್ತು ಹಣ್ಣುಗಳೂ ಆಗಿತ್ತು.

ಎಪ್ರಿಲ್ ತಿಂಗಳು; ವೈಶಾಖ ಮಾಸ. ಗೇರುಮರಗಳಿಗೆಲ್ಲ ಕೆಂಪೂ ಹಳದಿಯೂ ಹಣ್ಣುಗಳು ತೂಗುತಿದ್ದುವು. ಆ ಹಣ್ಣುಗಳನ್ನು ಮರಗಳಲ್ಲಿಯೆ ಕಿತ್ತು, ಮರಗಳಲ್ಲಿಯೆ ಕೂತು ತಿನ್ನಬೇಕೆಂಬಾಸೆ ಪುಂಡರೀಕನಿಗೆ ಬಲವಾಗ ತೊಡಗಿತು. ಹಾಗೆ ಮರದಲ್ಲಿ ಕೂತು ಗೇರುಹಣ್ಣಿನ ರುಚಿ ನೋಡುವ ಭಾಗ್ಯವು ಮಂಗಳೂರಿನ ಪ್ರತಿಯೊಬ್ಬ ಶಾಲೆಯ ವಿದ್ಯಾರ್ಥಿಗೆ ಒಂದಲ್ಲ ಒಂದು ದಿನ ಅವಕಾಶವಾಗಿ ಸಿಕ್ಕಿಯೆ ಸಿಕ್ಕುತ್ತದಷ್ಟೆ? ಮಾರ್ಚ್ ತಿಂಗಳು ಪ್ರಾರಂಭವಾಗುವುದೇ ತಡ, ಹುಡುಗರ ಗುಂಪುಗಳು ತೋಟದಿಂದ ತೋಟಕ್ಕೆ ಗೇರುಹಣ್ಣಿನ ಶಿಕಾರಿಗೆ ಹೊರಡುವುದುಂಟು. ಒಮ್ಮೊಮ್ಮೆ ಗುಂಪಿನವನೊಬ್ಬನು ತೋಟದ ಕಾವಲುಗಾರನಾಗಿ ನಟಿಸಿ, ತೋಟದ ದ್ವಾರದಲ್ಲಿ ನಿಂತು—ಅಲ್ಲಿ ಮತ್ತೆ ಬರುವವರನ್ನು ಬರಗೊಡದಂತೆ ಹೆದರಿಸಿ, ಓಡಿಸಿ—ಸ್ವಯಂ ತೋಟದವರೇ ಬಂದೊಡನೆ ಸಿಳ್ಳುಹಾಕಿ ತೋಟದೊಳಗಿದ್ದ ಗುಂಪಿನವರಿಗೆ ಆಕಾಶವಾಣಿ ಕಳುಹಿಸಿಬಿಡುತಿದ್ದನು. ತೋಟದ ಕಾವಲುಗಾರನು ಮತ್ತೆ ಓಡಿಸಿಬಂದಾಗ ಶಿಕಾರಿಯ ಹುಡುಗರು ಯಾವ ದಿಕ್ಕಿನಿಂದ, ಯಾವ ಗೋಡೆಯನ್ನು ಹಾರಿ, ಯಾವ ಬೇಲಿಯೊಳಗಿಂದ ನುಸುಳಿ, ಎಲ್ಲಿಗೆ ಪಲಾಯನ ಮಾಡಿದರೆಂಬುದು ಹೇಗೆ ತಾನೆ ಗೊತ್ತು? ಪುಂಡರೀಕನ ಗುಂಪು ಒಂದೊಮ್ಮೆ ಒಬ್ಬ ಕಾವಲುಗಾರನ ಕೈಬೆರಳಲ್ಲಿ ಸಿಕ್ಕಿಬಿದ್ದಾಗ, ಎಲ್ಲವರೂ ಗೋಡೆ ಹಾರಿ

ಮಿಂಚಿಬಿಟ್ಟರೂ, ನ್ಯಾಯಮೂರ್ತಿಯುಟ್ಟ ಧೋತರದ ಅಂಚು ಮರದ ಕೊಂಬೆಗೆ ಸಿಕ್ಕಿ, ಕಾವಲುಗಾರನ ಹಿಡಿತಕ್ಕೆ ಒಳಗಾದಾಗ, ನ್ಯಾಯಮೂರ್ತಿ ಹಾರಿದ ಪೆಟ್ಟಿಗೆ, ಧೋತರಕ್ಕೆ ಹಿಡಿದುಕೊಂಡಿದ್ದ ಕಾವಲುಗಾರ—ಆ ಹೊಲೆಯರ ಹುಡುಗ—ಧಾಂಡಿಗ—ಗೋಡೆಯೀಚೆಗೆ ತಲೆಕೆಳಗಾಗಿ ತೂಗುವಾಗ—ನ್ಯಾಯಮೂರ್ತಿಯೇಕೆ ಭೀತಿ ಪಡಬೇಕು? "ಎಲಾ ಪೆಟ್ಟಾಯಿತೆ?" ಎಂಬ ನ್ಯಾಯಮೂರ್ತಿಯ ಪ್ರಶ್ನೆಗೆ ಉತ್ತರವನ್ನೀಯದ ಕಾವಲುಗಾರನು ಮತ್ತೆ ಕಾಲು ಕುಂಟುತ್ತ ನಡೆದಾಗ—ನ್ಯಾಯಮೂರ್ತಿ ಯಾವ ಭಾವನಾಸಾಗರದಲ್ಲಿ, ಯಾವ ರಸದ ತೆಪ್ಪದಲ್ಲಿ ಕೂತಾಡಿದನೆಂದು ಗೊತ್ತಾಗಬೇಕಿತ್ತು ಆ ಕೂಟದಲ್ಲಿ ಅಂದಿನ ದಿವಸ ಹಾಜರಿಲ್ಲದ ಕಾಳಿದಾಸನಿಗೆ ಮಾತ್ರ.

ನಾವಿಬ್ಬರೂ ತೋಟವನ್ನು ಹೊಕ್ಕೆವು ಮನೆಯ ಅಂಗಳಕ್ಕೆ ದನವೊಂದು ಹುಲ್ಲು ಮೇಯಲು ಬಂದಾಗ, ಯಾವ ಮನುಷ್ಯನು ಅದನ್ನು ಓಡಿಸದೆ ಇರುವನು? ಅಂಗಳದ ಒಂದು ಬದಿಯಲ್ಲಿ ಕಷ್ಟಪಟ್ಟು ನೆಟ್ಟು ಬೆಳೆಯಿಸಿದ ಗುಲಾಬಿಯ ಗಿಡವಿದೆಯಷ್ಟೆ? ಇನ್ನೊಂದು ಬದಿಯಲ್ಲಿ ಪ್ರತಿನಿತ್ಯ ದೇವರ ಪೂಜೆಗೆ ಬೇಕಾದ ತುಳಸಿಯ ಗಿಡಗಳಿರುವುವಷ್ಟೆ? ದನ ಬಂದು, ಅವುಗಳನ್ನು ಮೆದ್ದು ಹೋಗಬಹುದೆ? . ಆದ್ದರಿಂದ ಕದ್ದು ತಿನ್ನುವ ದನ ಬಂದರೆ ಛೂ ಬಿಡುತ್ತೇವೆ, ಅಲ್ಲವೆ? ಕೋದಂಡನೂ ಪುಂಡರೀಕನೂ ತೋಟವನ್ನು ಹೊಕ್ಕಾಗ ಅವರ ಗ್ರಹಚಾರ ಹೇಗಿರಬಹುದು? ಕಳ್ಳಾಟಿಕೆಯ ದನವೆಂಬಂತೆ ಮೆದ್ದು ಓಡಬೇಕೆ? ಮೃಗಶಾಲೆಯ ಸಾಕುಮೃಗಗಳಂತೆ ಹೆದರಿಕೆಯಿಲ್ಲದೆ ಮೆದ್ದುಮೆದ್ದು ಅಲ್ಲಲ್ಲಿಯೆ ಸಂಭ್ರಮಣ ಮಾಡಿ ಶಬ್ದೇಂದ್ರಿಯಶೂನ್ಯರಾಗಬೇಕೆ? ಅದು ಅವರಿಗಂತೂ ಗೊತ್ತಿರಲಾರದು. ಆದರೆ, ಅವರಿಗಾದ ಶಕುನವು ಒಳ್ಳೆಯದೊ, ಅದಕ್ಕೆ ವಿರೋಧವೊ ತಿಳಿಯದು. ಏತಕ್ಕೆಂದರೆ, ಹಕ್ಕಿಗಳ ಸಾಲು ಎಡದಿಂದ ಬಲಕ್ಕೆ ಸಾಗಿ ಮತ್ತೆ ದಿಕ್ಕನ್ನು ಬದಲಾಯಿಸಿ ಎಡಗಡೆಗೇನೇ ಹಾರಿ ಹೋಗಿತ್ತು. ಅವುಗಳು ಹಾಗೆ ತಮ್ಮ ಸಂಭ್ರಮಣವನ್ನು ಮಾಡುವಾಗ ನಾನೂ ಪುಂಡರೀಕನೂ ಸಣ್ಣ ಸಣ್ಣ ಪೊದರುಗಳ ಮೇಲಿಂದ ಹಾರಿ, ವೈಮೇಲಿನ ವಸ್ತ್ರಕ್ಕೆ ಅಂಟಿಕೊಂಡ ಮುಳಿಹುಲ್ಲಿನ ತುದಿಗಳನ್ನು ಕಿತ್ತೊಗೆದು, ಕೈಗೆ ಸಿಕ್ಕಿದ ಗೇರುಹಣ್ಣುಗಳನ್ನು ಕಿತ್ತು, ಅರ್ಧಕ್ಕರ್ಧವೆಂಬಂತೆ ತಿಂದು, ಉಳಿದುದನ್ನು ಅಲ್ಲಿಯೆ ಚೀಪಿ ಬಿಸಟು ಮುಂದಕ್ಕೆ ನಡೆದೆವು. ಬಹಳ ಮುಂದಕ್ಕೆ ನಡೆದಾಗ, ವಿಶಾಲವಾದ ತನ್ನ ತಳಿರುಗೋಪುರವನ್ನು ಬಿಡಿಸಿಕೊಂಡು ಎಲೆಯೊಂದಕ್ಕೆ ಹಣ್ಣೊಂದನ್ನು ಇಳಿಸಿದ ಮರದ ಬುಡಕ್ಕೆ ಬಂದು ನಿಂತೆವು. ನಾಲ್ಕು ಕಡೆಗೂ

ಒಮ್ಮೆ ದೃಷ್ಟಿಯನ್ನು ಹೊರಳಿಸಿ ನಿಶ್ಶಬ್ದವಾದ ಆ ವಾತಾವರಣದಲ್ಲಿ ಅನಾಮಧೇಯ ವಿಹಗಗಳು ಮರಗಳ ತಳಿರೆಡೆಯಿಂದ ಕೂಗಿಡುವುದನ್ನು ಕೇಳುತ್ತ ಮರದ ಕೊಂಬೆಗಳನ್ನು ಬಗ್ಗಿಸುತ್ತ ಹಣ್ಣು ಕಿತ್ತುಕೊಂಡೆವು. ಮೆಲ್ಲನೆ ಪುಂಡರೀಕನು ಮರವನ್ನೇರಿ ಕೋದಂಡನೊಡನೆ 'ಆ ಹಣ್ಣು' 'ಈ ಹಣ್ಣು' ಎನ್ನುತ್ತ ರುಚಿ ಹೇಳಿ, ತಾನೂ ರುಚಿಸಿ, ನನಗೂ ಕೆಲವನ್ನು ಬಿಸುಟು ಗೇಲಿ ಮಾಡಿದನು. ತಾನು ಕೆಳಬಿಸುಟ ಹಣ್ಣನ್ನು ಕೋದಂಡನು ಬಾಯಲ್ಲಿಯೆ ಹಿಡಿದ ಪಕ್ಷದಲ್ಲಿ ಅದೊಂದು ದೊಡ್ಡ ಸರ್ಕಸ್ಸೆಂದನು. ಅಂತಹ ಸರ್ಕಸ್ ಕುಸ್ತಿಯನ್ನು ವಿದ್ಯಾರ್ಥಿಯಾಗಿದ್ದಾಗ, ಹತ್ತು ವರ್ಷದ ಹಿಂದೆ ತಾನು ಮಾಡಿದ್ದೆನೆಂದೂ, ಅದರ ನೆನೆಪು ತನಗೆ ಆದಾಗಲೆ ಮೊದಲನೆ ಬಾರಿ ಆಗುತ್ತದೆಂದೂ ನಕ್ಕು ನುಡಿಯುವಾಗ ಪುಂಡರೀಕನು,—ಕೆಳಸಿಂತ ಕೋದಂಡನು ಹಲ್ಲು ಬಿಟ್ಟು ಬಾಯಿಯಗಲ ಮಾಡಿ ಕಣ್ಣನ್ನು ಅರಳಿಸದೆ ಇದ್ದಿದ್ದರೆ, ಅದರಲ್ಲಿ ಬೀಳಬೇಕಿತ್ತೇನು?—ಮಧುಮಧುರವಾದ ರುಚಿಯಲ್ಲಿ ಹುಟ್ಟಿ, ಈಷತ್ ಪೀತಾಂಕಿತ ಪಕ್ವ ಬಿಂಬೋದರ ಸದೃಶ ವರ್ಣ ಪೃಥಕ್ ಬೀಜ ಫಲವೆಂಬುವ ಗೇರು ಹಣ್ಣೇ ಅಲ್ಲವೆ?

ಕೈಗೆ ಮತ್ತೆ ಗೇರುಹಣ್ಣು ತಾಗುವುದಿಲ್ಲವೆಂದು, ತನ್ನ ಶರ್ಟಿನ ಬದಿ ಮೇಲಕ್ಕೊತ್ತಿ ಕೈರಟ್ಟೆಗೆ ಕೇಯೂರ ಭೂಷಣವನ್ನು ಒದಗಿಸಿ ಹಾವಿನ ಹಾಗೆ ಕೊಂಬೆಯ ಮೇಲೆ ಮೈಚಾಚಿ, ನರ್ತಕಿಯ ಹಾಗೆ ಗಾಳಿಯ ತೆರೆಯಲ್ಲಿ ಕುಡಿಬೆರಳ ಕೈಚಾಚಿ, ಚಿಕ್ಕ ಟೊಂಗೆಯೊಂದನ್ನು ಎಡಕೈಯಲ್ಲಿ ಹಿಡಿದು, ಇನ್ನೊಂದು ದೊಡ್ಡ ಟೊಂಗೆಯನ್ನು ಬಲಗೈಯಿಂದ ಅಲ್ಲಾಡಿಸಿ, ಹಣ್ಣುಗಳನ್ನು ಪುಂಡರೀಕನು ಉರುಳಿಸಿದನು. ಉರುಳಿಸಿದ ಹಣ್ಣುಗಳು ಕೆಳಗೆ ತರಗೆಲೆಯ ರಾಶಿಯಲ್ಲಿ ಬಿದ್ದು ಸರಸರಕ್ ಎಂದು ಮುಖರಾಯಮಾನವಾದೊಡನೆ, ಇಡಿಯ ತೋಟದಲ್ಲಿ ನಾವಲ್ಲದೆ ಮತ್ತಾರೂ ಇಲ್ಲದಿದ್ದಾಗ ಪುಂಡರೀಕನು ಮಕ್ಕಳಲ್ಲಿ ಮಗುವಾಗಿ ವರ್ತಿಸುತಿದ್ದಾಗ—ಕೋದಂಡನ ಬಾಯೊಳಗಿನ ಗೇರುಹಣ್ಣು ಜೀರ್ಣವಾಯಿತೆ? ಕೆಳ ಬಿದ್ದು ಹೋಯಿತೆ? ಅಂತರ್ಧಾನವಾಯಿತೆ? ಸಂಶೋಧಕರೆ ನಿರ್ಧರಿಸಿಕೊಳ್ಳಲಿ. ಆವೆ ಮಣ್ಣಿನಿಂದ ಮಡಕೆ ಮಾಡುವಾಗ ಯಾವ ಕೈಯ ದೀಕ್ಷೆ ಕುಂಬಾರನಿಗಿದೆ, ಆ ದೀಕ್ಷೆಯನ್ನು ತಮ್ಮ ತಲೆಯೊರುಟಿಗೆ ಅನ್ವಯಿಸಿ ಇದನ್ನು ನಿರ್ಧರಿಸಿಕೊಳ್ಳಲಿ.

ಏತಕ್ಕೆಂದರೆ, ಮರವೇರಿದ ಪುಂಡರೀಕನು, ಕಿನ್ನರಕಂಠದ ಸ್ವಾಭಾವಿ

ಕತೆ ಇಲ್ಲದಿದ್ದರೂ ಹಾಡಲಾರಂಭಿಸಿದನು; "ಎಲ್ಲಿ ಬಿತ್ತು? ಅಲ್ಲಿ ಬಿತ್ತು!" ಎಂದು ಏನೋ ಒಂದು ಉದ್ದಾಮ ಹಾಡನ್ನು ಹಾಡುತ್ತ ಪ್ಮೈಮರೆತನು. ಕೆಳನಿಂತ ಕೋದಂಡನಿಗೆ ಕೋಗಿಲೆಯನ್ನು ಕಾಣುವ ಸೌಭಾಗ್ಯವು ಅಂದಿನ ವರೆಗಾದರೂ ಲಭಿಸಿರಲಿಲ್ಲವಾದ್ದರಿಂದ ಹಾಡುವ ಪುಂಡರೀಕನೇ ಕೋಗಿಲೆಯಾಗಿದ್ದಿರಬಹುದೆಂದು ಒಮ್ಮೆ ಭ್ರಮಿಸುವಂತಾಯಿತು.

"ಎಲ್ಲಿ ಬಿತ್ತು? ಅಲ್ಲಿ ಬಿತ್ತು!" ಎಂದು ಪುಂಡರೀಕನು ಹಾಡುವಾಗ ದೂರದಿಂದೇನೋ ಶಬ್ದವುಂಟಾಗಲಾರಂಭವಾಯಿತು. ಯಾರೋ ತರಗಿನ ರಾಶಿಯ ಮೇಲೆ ನಡೆದುಬರುವಂತೆ ಕೇಳಿಸಿತು. ಆದರೆ, ಗೇರುಹಣ್ಣನ್ನು ಬಾಯಲ್ಲಿ ಮರೆತ ನಾನು, ಮರದ ಕೊಂಬೆಗಳನ್ನು ಅಲ್ಲಾಡಿಸಿ ಶಬ್ದ ಮಾಡುವ ಪುಂಡರೀಕನ ಹುಡುಗಾಟಿಕೆಯೊಡನೆ ಬೆರೆತೆನು.

"ಏನು ಬಿತ್ತು? ಹೇಗೆ ಬಿತ್ತು?" ಎಂದು ಪಡಿಗಬ್ಬದ ಲಹರಿಗಳನ್ನು ನಾನೂ ಉರುಳಿಸಿದೆನು.

"ಇಂದ್ರವನದ ಹಣ್ಣು ಬಿತ್ತು,
ಸ್ವರ್ಗದಿಂದ ಹೀಗೆ ಬಿತ್ತು," ಎಂದು ಕಾವ್ಯಾಲಾಪದ ವೀಚಿಗಳು ತಿರಿಗೊಮ್ಮೆ ಪುಂಡರೀಕನಿಂದ ಮರಳಿದುವು. ದೂರದ ತರಗಿನ ರಾಶಿಯ ಮೇಲೆ ಯಾರೋ ಓಡುತ್ತ ಬರುವುದು ಸ್ಫುಟವಾಗುತ್ತ ಬಂತು.

"ಹುಡ್ಗ್ರೋ! ಕಳ್ರು!! ಕಳ್ರು!!!" ಎಂಬ ಕೂಗೂ ಕೇಳಿಸಿತು.

"ಹಕ್ಕಿ ಹಾರುತಿದೆ, ನೋಡಿದೆಯಾ?" ಎಂಬ ಕಾವ್ಯಾಮೃತದ ಎದುರು "ಬೆಕ್ಕು ಓಡುತಿದೆ, ಕೇಳಿದೆಯಾ?" ಎಂಬ ಸುರಾಮ್ಲತೆಯು ನಿಲ್ಲುವುದೆ?

ಪುಂಡರೀಕನು ಹಾಡುತ್ತ ಹೋದನು.

"ಇಂದ್ರ ವನದ ಹಣ್ಣು ಬಿತ್ತೆ?,
ಭೂಮಿಗೊಂದು ಹೆಣ್ಣು ಬಂತೆ?"

ಎಂದು ನಾನು ಮಾರ್ನುಡಿದೆನು. ತರಗಿನ ರಾಶಿಯ ಅಪಸ್ವರವೂ ದಟ್ಟಗಾಯಿತು.

"ಇಂದ್ರ ವನದ ಹೆಣ್ಣು ಬಂತು,
ಹೆಣ್ಣ ಕೊರಲ್ಗೆ ಹೊನ್ನು ಬಂತು,
ಬಂತು ಬಂತು ಮುತ್ತು ಬಂತು!"

ಎಂದು ಪುಂಡರೀಕನು ಆನಂದದ ರೆಕ್ಕೆಯಲ್ಲಿ ಕೂತು ಹಾರಿಬಿಟ್ಟನು.

ತರಗಿನ ರಾಶಿಯ ಮೇಲೆ ಓಡಿಬರುವ ಕೂಗೂ ದಪ್ಪವಾಗುತ್ತ ಮುಂದಕ್ಕೆ ಮುಂದಕ್ಕೆ ಬರುತಿದ್ದಿತು.

"ಬಂದ ಮುತ್ತು ತಪ್ಪಿ ಹೋಯ್ತೆ?

ತಪ್ಪಿ ಬಂದ ಮುತ್ತು ಹೋಯ್ತೆ?"

ಎಂದು ನಾನು ಕನ್ನಡ ವಾಗ್ದೇವಿಯ ಟಂಕಸಾಲೆಯ ಕವವನ್ನೇ ತೆರೆದು ಬಿಟ್ಟೆನು.

ಒಮ್ಮೆಲೆ ನಿಶ್ಶಬ್ದವಾಯಿತು.

ತರಗಿನ ರಾಶಿಯ ಮೇಲಿನ ಅಪಸ್ವರವೂ ನಿರ್ನಾಮವಾಯಿತು.

ಪುಂಡರೀಕನ ಕಾವ್ಯಾಮೃತ ಸಾಗರದ ಘೋಷವು ಘಟಕ್ಕನೆ ನಿಂತಿತು.

ಕವಿತೆಯ ರೆಕ್ಕೆಯಲ್ಲಿ ಕೂತು ಹಾರಿದ ಪುಂಡರೀಕನಿಗೆ ದಿಗಿಲು ಉಂಟಾಯಿತು.

ಗೆರಸೊಪ್ಪೆಯ ಜಲಪಾತವು, ನಾಯಗಾರದ ಜಲಪಾತವು ಒಮ್ಮೆಲೆ ನಿಂತುಬಿಟ್ಟು ನಿಶ್ಶಬ್ದವಾಗುವುದಾದರೆ, ಯಾವ ದಿಗಿಲು, ಯಾವ ದಿಗ್ಭ್ರಮೆ, ಯಾವ ಹುಚ್ಚು ಜನಗಳಿಗುಂಟಾಗಬಹುದು—ಆ ದಿಗಿಲು, ಆ ದಿಗ್ಭ್ರಮೆ, ಆ ಹುಚ್ಚು ಪುಂಡರೀಕನಿಗುಂಟಾಯಿತು. ತನ್ನ ಕತ್ತನ್ನು ಮೇಲ್ಮಾಡಿ, ಕೊಂಬೆಯ ತಳಿರ್ಗೊಂಪಿನ ಮಧ್ಯದಿಂದ ನೋಡುತ್ತಾನೆ ಪುಂಡರೀಕನು!—ಅಲ್ಲಿಯೆ ದೂರದಲ್ಲಿ ತರಗಿನ ರಾಶಿಯ ಮೇಲೆ ತನ್ನನ್ನೆ ಎವೆಯಿಕ್ಕದೆ ನೋಡುತ್ತಿರುವ—ತನ್ನ ತರಗತಿಯಲ್ಲಿ ಓದುತ್ತಿರುವ ಸೋಮಣ್ಣನನ್ನು!! ಸೋಮಣ್ಣನು ಚಿತ್ರದ ಬೊಂಬೆಯಂತೆ ನಿಂತು ಪುಂಡರೀಕನನ್ನು ನೋಡುವಾಗ, ಪುಂಡರೀಕನು ಸಿಡಿಲು ಬಡೆದ ತಾಳೆಯಂತೆ ನಿರ್ಜೀವವಾಗಿ ಹೋಗಿದ್ದನು.

"ನಿಮ್ಮ ತೋಟವೇ ಇದು?" ಎಂದು ಪುಂಡರೀಕನೇ ಮತ್ತೆ ಪುನರ್ಜನ್ಮವೆತ್ತಿ ಉಸಿರನ್ನೆಳೆದುಕೊಂಡನು.

"ಹೌದು, ಸಾರ್, ಬನ್ನಿ, ಸಾರ್, ಇಲ್ಲಿಯೇ ಒಂದು ಚಾವಡಿಯಿದೆ. ಒಳ್ಳೆ ಹಣ್ಣನ್ನು ತೆಗೆಯಿಸುತ್ತೇನೆ," ಎಂದು ಸೋಮಣ್ಣನು ಪುತ್ಥಳಿಯ ಗೊಂಬೆಯಾಗಿ ಉಪಚಾರಮಾಡಿದನು.

ಪುಂಡರೀಕನು ಕೆಳಗಿಳಿದು ಬಂದನು. ನಾವು ಮತ್ತೆ ಚಾವಡಿಗೆ ನಡೆದೆವು. ಸೋಮಣ್ಣನೊಡನೆ ಪುಂಡರೀಕನು ತುಂಬಾ ಪ್ರಸ್ತಾವ ತೆಗೆದು ಮಾತನಾಡಿ ಮುಗಿಸಿದನು.

ಮನೆಗೆ ಹಿಂತೆರಳುವಾಗ, "ಅದು ಅವನ ಓಮುಚಾವಡಿ. ಗ್ರಾವ ಚಾವಡಿಯಾಗಿದ್ದರೆ ಹೇಗಿತ್ತು?" ಎಂದು ಕೇಳಿದೆನು.

"ಉಪಾಧ್ಯಾಯನಾಗಿದ್ದೇನೆ ಎಂದು ಇಂದೇ ಕಲಿತುಕೊಂಡೆ ಕೋದಂಡಾ," ಎಂದು ಪುಂಡರೀಕನು ನಸುನಕ್ಕನು.

## ೬. ಕನ್ನಡಿಗರಡಿಯಾಳು

ವಾನರಸರಸ್ವತಿಯು ಪ್ರಶಸ್ತಿಯೊಂದನ್ನು ಬರೆಯಿಸಿ ಪ್ರಕಟಿಸಿದ 'ಅರೆರನ್ನ'ನೆಂಬ ಕವಿಸಾರ್ವಭೌಮನಿಗೆ 'ಕನ್ನಡಿಗರಡಿಯಾಳು' ಎಂಬ ಬಿರುದನ್ನು ದಯ ಪಾಲಿಸಿದಂದಿನಿಂದ ಕೋದಂಡನಿಗೊಂದು ಭ್ರಮೆ ಹಿಡಿದಿದೆ. 'ಕನ್ನಡಿಗರಡಿಯ ಳು'ಎಂದು ಆ ಅಷ್ಟಾಕ್ಷರೀ ಬಿರುದು ಅರೆರನ್ನನಿಗೆ ಸಮಂಜಸವಾಗುವುದಕ್ಕಿಂ ಕವಿಸಂಘದ ಪುಂಡರೀಕನಿಗೆ ಸರಿಯಾಗಿ ಒಪ್ಪುತ್ತಿದೆಯೆಂದು ಹೇಳಬೇಕಾಗಿದೆ ಪುಂಡರೀಕನೀಗ ಸಾಹಿತ್ಯಕ್ಷೇತ್ರದಿಂದ ನಿವೃತ್ತನಾಗಿರಬಹುದು; ಆದರೆ, ಕ ಸಂಘವು ಜಾಂಬವನ ನೇತೃತ್ವದಲ್ಲಿ ದಕ್ಷಿಣಸಮುದ್ರದೆಡೆಗೆ ಮುನ್ನಡೆದು ಅಳೀ ಸೇವೆಯ ಸೇತುವನ್ನು ಕಟ್ಟುವಾಗ ಪುಂಡರೀಕನು ತನ್ನ ಯತ್‌ಕಿಂಚಿತ ಯಾವ ಸೇವೆಯನ್ನು ಮಾಡಿದನು, ಎಂಬುದನ್ನು ಇಂದಿನ ದಿವಸ ಆಲೋಚಿಸ ವಾಗ, ಆ ಅಷ್ಟಾಕ್ಷರೀ ಆತನಿಗೇನೇ ಸಲ್ಲತಕ್ಕದ್ದು ಎಂದು ಘಂಟಾಘೋಷವಾ ದೇವಸ್ಥಾನಗಳಲ್ಲಿಯೂ, ಬೇಂಡ್ ಬೊಬ್ಬೆಯಾಗಿ ಇಗರ್ಜಿಗಳಲ್ಲಿಯೂ, ತಿತ್ತಿ ಚಿರಿಚಿರಿಯಾಗಿ ಮುಸಲ್ಮಾನ್ ಕೇರಿಗಳಲ್ಲಿಯೂ ಡಂಗುರ ಹೊಯ್ಯಿಸಬಹುದು ಪುಂಡರೀಕನು ಮಾಡಿದಷ್ಟು ಗರಡಿವಿದ್ಯೆಯನ್ನು ಕಂಡಿತವಾಗಿಯೂ ಅರೆರನ್ನನ ಮಾಡಿರಲಿಕ್ಕಿಲ್ಲವೆಂದು ಪಣತೊಡಬಹುದು. ('ಕಂಡಿತವಾಗಿ' ಎಂದೆನೆ? ಹೌದು 'ಖಂಡಿತವಾಗಿ' ಅಂದರೆ, ಮಹಾಪ್ರಾಣಗಳಿಲ್ಲದ ಕನ್ನಡ ಭಾಷೆಯಲ್ಲಿ ಮಹ ಪ್ರಾಣದಿಂದಲೆ ಮೊದಲಾಗುವ ಅಚ್ಚಗನ್ನಡ ಶಬ್ದವೆಲ್ಲಿಂದ ಬರಬೇಕು?– ಎಂದು ಪ್ರಾಕ್ತನ ವಿದ್ಯಾವಿಮರ್ಶಕರು ಒತ್ತಿ ಒತ್ತಿ ಬರೆಯುತ್ತಿದ್ದಾರೆ. ಅವರ ಒತ್ತಿದಷ್ಟಕ್ಕೆ ಕಾಗದ ಹರಿಯುವುದನ್ನು ವಾಗ, ಕೋದಂಡನು ಹಾಗೆ ಕಾಗದಕ ಅನ್ಯಾಯವಾಗಲು ಬಿಡನು ಎಂಬುದಿಂತಿಷ್ಟೆ, ಅದಕ್ಕೆ ತಕ್ಕ ಉತ್ತರವೇನ ಬಹುದು.) ಆದ್ದರಿಂದ, ಆತನೇಕೆ 'ಕನ್ನಡಿ–ಗರಡಿಯಾಳು' ಆಗಬಾರದು?

ತಿಂಗಳೂರಿನ ಮಾಂಬಿಗುರು ಮಂಗಳೂರಿಗೆ ಬಂದಾಗ ಆತನನ್ನು ಕಾ ಲು ಪುಂಡರೀಕನು ಆತನಿದ್ದ ಠಾವಿಗೆ ಹೋಗಿದ್ದನು. ಆದರೆ ಮಾಂಬಿಗುರು ತ

ಸುಂದೋಪಸುಂದರ ಹಾಗೂ ಗಣಾಂಗಣದವರ ತಾಬೀತಿನಲ್ಲಿಯೆ ಇನ್ನು, ಅವರ ಅಪ್ಪಣೆ ಸಿಗದೆ ಪುಂಡರೀಕನಿಗೆ ಮಾಂಬಿಗುರುವಿನ ದರ್ಶನವಾಗಲಿಲ್ಲ. ಹಾಗೆಂದು ಪುಂಡರೀಕನು, 'ಸಾಯಲಿ!' ಅನ್ನದೆ—ಊಟದ ಸಮಯವೇ ಆಗಿದ್ದರೂ ಕೂಡ, ನೆಟ್ಟಗೆ ಮಾಂಬಿಗುರು ಕೂತಲ್ಲಿ ಹೋಗಿ ಅವರಿಂದ ಆಸನದ ಉಪಚಾರವನ್ನೂ ತೆಳ್ಳಗಿನ ಒಗ್ಗರಣೆ ಹಾಕಿದ ಮಜ್ಜಿಗೆಯ ಪಾನಕವನ್ನೂ ಪಡೆದು ಸ್ವೀಕರಿಸಿ, ಮಾಂಬಿಗುರುವಿಗೆ ಭಾಷಣದ ಬದಲು ಸಿಭಾ೯ಷಣದ ಗೌರವವನ್ನು ಕವಿಸಂಘದಲ್ಲಿ ಏರ್ಪಡಿಸಿ ಬಂದವನಾಗಿರುತ್ತಾನೆ.

ರಾಮನವಮಿ ಉತ್ಸವವನ್ನು ಪ್ರತಿ ವರ್ಷವೂ ಏರ್ಪಡಿಸಿ, ಉತ್ಸವದ ದಿನಗಳು ನಡೆದಂತೆ ಕಾರ್ಯಕ್ರಮದ ರೀತಿನೀತಿಗಳಲ್ಲಿ ಉಚ್ಚಾಟನೆ, ವರ್ಗಾವರ್ಗಿ, ತಕ್ಕ ಮಟ್ಟಿನ ವಿಲೆವಾರಿ ಇವುಗಳೆಲ್ಲವನ್ನು ಮಾಡಿ ಎಲ್ಲರಿಂದಲೂ ಬೈದುಕೊಳ್ಳಿಸಿ, ನಾಲ್ಕು ದಿವಸಗಳನಂತರ ಎಲ್ಲರಿಂದಲೂ ಹೊಗಳಲ್ಪಡುತಿದ್ದನು. ಪುಂಡರೀಕನು ಕೈಗೊಳ್ಳುವ ಪ್ರತಿಯೊಂದು ಕಾರ್ಯಕ್ರಮವು ಒಂದೊಂದು ಗರಡಿಸಾಧನೆಯಾಗಿತ್ತು.

ಸಾವಿರದೊಂಬೈನೂರ—ನೆಯ ರಾಮನವಮಿ ಉತ್ಸವದ ಕಾಲದಲ್ಲಿ ಪುಂಡರೀಕನ ಡೇರೆಯಲ್ಲಿ ಅಯಾಚಿತವಾಗಿಯೆ ತುಂಬಾ ಸಾಹಿತ್ಯಸೇವಕರು ಬಂದು ನೆರೆದಿದ್ದರು. ಅವರೆಲ್ಲರಿಗೂ ಕನ್ನಡದ ಪುನರುತ್ಥಾನವಾಗಿ ಕನ್ನಡದ ಸಂಸ್ಕೃತಿಯು ಸರ್ವತೋಮುಖವಾಗಿ ಹಬ್ಬಿ ಹರಡುವಂತಾಗಬೇಕೆಂಬುದು ಹೆಬ್ಬಯಕೆಯಾಗಿತ್ತು. ಈ ಸಾಹಿತ್ಯ ಸೇವಕರೆಲ್ಲರೂ ಪುಂಡರೀಕನೊಡನೆ ಸೊಂಟಕಟ್ಟಿ ಅಳಿಲ ಸೇವೆಗೆ ಉದ್ಯುಕ್ತರಾಗಿದ್ದರು. ಈ ಸಾಹಿತ್ಯ ಸೇವಕರಿಗೆ ಅವರವರ ಕಾರ್ಯಕ್ಷೇತ್ರವು ಚೆನ್ನಾಗಿ ಪರಿಚಿತವಾಗಿದ್ದುದರಿಂದ ಪುಂಡರೀಕನು ಅವರಿಗೆ ಗೌರವ ಸೂತ್ರಧಾರನಾಗಿ ಮಾತ್ರ ನಾಯಕನಾಗಿದ್ದನು. ರಂಗಭೂಮಿಯ ಸಂಪೂರ್ಣ ಸ್ವಾತಂತ್ರ್ಯವು ಆ ಸಾಹಿತ್ಯಭಕ್ತರಿಗೆ ಬಿಟ್ಟು ಕೊಡಲ್ಪಟ್ಟಿತ್ತು. ಪುಂಡರೀಕನ ಮೇಲ್ವಿಚಾರಣೆಯೆಂದರೆ,—ಪ್ರತಿದಿನ ಉತ್ಸವದ ಮೊದಲು, ಮೂರುನಾಲ್ಕು ತಾಸು ಮುಂಚಿತವಾಗಿ ಉತ್ಸವದ ಠಾವಿಗೆ ಬಂದು ಒಂದೇ ಒಂದು ಕಾಗೆಯನ್ನಾದರೂ ಅಲ್ಲಿ ಕಾಣದೆ—ಕಾಗೆಯೆಂದೆನೆ?—ಸಮಾಪದ ಕಾಫಿಭವನವನ್ನು ಹೊಕ್ಕು ಬಾಯಾರಿಕೆಗೆ ಕುಡಿದುಬಂದು—ಬಾಗಿಲುಗಳನ್ನು ತೆರೆಯಿಸಿ, ತೆರೆದು—ಕಸವನ್ನು ಗುಡಿಯಿಸಿ (ವ್ಯಾಕರಣದೋಷ ವಿರಬಹುದು)·ಗುಡಿಸಿ-- ಅತ್ತಿಂದಿತ್ತ ಇತ್ತಿಂದತ್ತ ನಡೆಯುತ್ತ ಮತ್ತೆ ವಿದ್ಯುದ್ದೀಪಗಳ

ಫ್ಯೂಜುಗಳನ್ನು ಪರೀಕ್ಷಿಸಿ— ಅಲ್ಲಿಯ ಬೆಂಚಿನಲ್ಲಿ ಒಂದು ನಾಲ್ಕು ನಿಮಿಷ ಒರಗಿ ಮತ್ತೆ ಎದ್ದು, ಅಧ್ಯಕ್ಷರಿಗೆ ಎದುರು ಟೇಬಲಿನ ಮೇಲೆ ವಸ್ತ್ರವನ್ನು ಹರಿಸಿ ಹಾಸಿ, ಆದರ ಮೇಲೆ ಹೂವಿನ ಪಾತ್ರವನ್ನು ಅಲಂಕರಿಸಿ, ಇತ್ಯಾದಿ ಇತ್ಯಾದಿ ಕೆಲಸಗಳನ್ನು ಮಾಡುವುದು ತಾನೆ ಆಗಿತ್ತು. ಅಷ್ಟರ ನಾಯಕತ್ವಕ್ಕೆ ಪುಂಡರೀಕನು ಸೂತ್ರಧಾರಿಯಾದರೂ ಉತ್ಸವವು ತನ್ನಿಷ್ಟಕ್ಕಾಗಿಯೇ ನಡೆದು ಹೋಗುತಿತ್ತು.

ನಾಟಕದ ತಯಾರಿಯನ್ನು ಸಾಹಿತ್ಯಸೇವಕರು ವಹಿಸಿಕೊಂಡಿದ್ದರು. ಅವರು ಎಷ್ಟೋ ಬಾರಿ ಎಷ್ಟೋ ಉತ್ಸವಗಳಲ್ಲಿ ನಾಟ್ಯಗಳನ್ನೂ ನಾಟಕಗಳನ್ನೂ ನಾಟಿಕೆಗಳನ್ನೂ ಪ್ರದರ್ಶಿಸಿ ಹೆಸರು ಹೋದವರಾಗಿದ್ದರು. ನಾಟಕಕ್ಕೆ ನಿಯಮಿತವಾದ ಕಾಲಕ್ಕಿಂತ ಮೊದಲು ಇಬ್ಬರು ಉದ್ದಾಮ ಪಂಡಿತರ ಭಾಷಣಗಳಿದ್ದುವು. ಮೊದಲನೆಯವರ ಭಾಷಣಕ್ಕೆ ಪ್ರಾರಂಭವಾಗುವಾಗ ಪಾತ್ರಧಾರಿಗಳೆಲ್ಲರೂ ಒಟ್ಟು ಸೇರಿದರು. ಆದರೆ, ನಾಯಿಕೆಯ ಪಾತ್ರಧಾರಿ ಇನ್ನೂ ಬಂದಿರಲಿಲ್ಲ. ಬಹಳ ಆಲೋಚನೆಯಾದನಂತರ ಶ್ರೀಮಾನ್ ಮಲ್ಲಿಯು ನಾಯಿಕೆಯಾಗುವುದೆಂದು ನಿರ್ಧಾರವಾಯಿತು. ಮಲ್ಲಿಯು ನಾಯಿಕೆಯಾಗುವುದಾದರೆ, ವಾಸು ನಾಯಕನಾಗುವುದು ಒಪ್ಪುತಿದ್ದಿಲ್ಲ. ಆದ್ದರಿಂದ ಮಾದಪ್ಪನ ನಾಯಕತ್ವಕ್ಕೆ ತೀರ್ಮಾನವಾಗಬೇಕಾಯಿತು. ಇಷ್ಟಾಗುವಾಗ ಪ್ರಥಮ ಭಾಷಣವು ಕೊನೆಗಂಡಿತು. ಪುಂಡರೀಕನು ನಟರ ಮಧ್ಯದಲ್ಲಿ ನಿಂತು, "ಏನು! ಏನಾಯ್ತು?" ಎಂದು ವಿಚಾರಿಸಿದನು. "ಏನಿಲ್ಲ, ಎಲ್ಲ ಸರಿಹೋಗುತ್ತದೆ," ಎಂಬ ಸರ್ವೋಪಲೇಪಿ ಉತ್ತರವು ಆತನಿಗೆ ಕೊಡಲ್ಪಟ್ಟಿತು.

ಎರಡನೆಯ ಭಾಷಣವು ಮುಗಿಯುವುದರೊಡನೆ ಪಾತ್ರಧಾರಿಗಳೆಲ್ಲರೂ ವೇಷಧಾರಿಗಳಾಗಿ ಸಿದ್ಧರಾಗಬೇಕಿತ್ತು. ನಾಯಿಕೆಯು ಬಣ್ಣವನ್ನು ಹಚ್ಚಿ, ಮೊಲೆಗಳನ್ನು ಕಟ್ಟಿ, ಕೂದಲ ಟೊಪ್ಪಿಯನ್ನು ತಲೆಗಿಟ್ಟು, ಕೆಂಪಗಿನ ಸೀರೆಯನ್ನುಟ್ಟು, ಕನ್ನಡಿಯಲ್ಲಿ ನಿಂತು ತುಟಿಗಳಿಗೆ ರಂಗು ಬಳಿಯುವಾಗ ಬಂದೇ ಬಂದನು ರಾಘು— ನಾಯಿಕೆಯ ಪೂರ್ವೋಕ್ತ ಪಾತ್ರಧಾರಿ. ಗಾಂಧಿಟೋಪಿಯನ್ನು ಮೇಜಿನ ಮೇಲೆ ಬಿಸುಟು, ಕೋಟನ್ನು ತೆಗೆದು ಬೆಂಚಿನ ಮೇಲೆ ಬಿಸುಟು, ಬಿಳಿಯ ಹುಡಿಯನ್ನು ನೀರಿನೊಡನೆ ಕೈಯಲ್ಲಿ ಕಲಸುವಾಗ ಎದುರಿನಲ್ಲಿ ಕನ್ನಡಿಯಲ್ಲಿ ಮುಖವಿಟ್ಟು ಹಲ್ಲುಗಳ ಎಡೆಯಲ್ಲಿ ಏನನ್ನೊ ಪರೀಕ್ಷಿಸುತಿದ್ದ ನಾಯಿಕೆಯನ್ನು ಕಂಡು ಹೌಹಾರಿದನು ರಾಘು. ಆಗ ಬಿಸಿ ನೀರಿನ ಗುಟುಕಾ

ಯಿತು. ಉಟ್ಟ ಸೀರೆಯನ್ನು ಕಳಚುವುದಿಲ್ಲವೆಂದು ಮಲ್ಲಿ; ಒಮ್ಮೆ ಕಳಚಿದ ಸೀರೆ ಯನ್ನು ತಾನು ಉಡಲಾರೆನೆಂದು ರಾಘು. ನಾಯಿಕೆಯು ಬೇರೆ ಯಾಗುವುದಾ ದರೆ ಮಾದಪ್ಪನು ಹೊರಗೆ. ಹೀಗಿರುವಾಗ, ಎರಡನೆ ಭಾಷಣವೂ ಮುಗಿಯುತ್ತ ಬಂತು. ಪುಂಡರೀಕನು ಅತ್ತಿತ್ತ-ರಂಗಭೂಮಿಯಲ್ಲಿ-ಫರದೆಯ ಹಿಂದೆ, ನೆನಪಿರಲಿ, ಅಲೆದಾಡುತ್ತ ಫಕ್ಕನೆ ತೆರೆಯ ಈ ಕಡೆ ಅಧ್ಯಕ್ಷರ ಬಳಿ ನಡೆದು, ''ಸ್ವಾಮಿ, ಬಹಳ ತೊಂದರೆಗಿಟ್ಟಿದೆ, ನಿಮ್ಮ ಮುಕ್ತಾಯಭಾಷಣವನ್ನು ನಾವು ಹೇಳುವ ತನಕ ಮುಕ್ತಾಯ ಮಾಡಬೇಡಿ," ಎಂದು ಅವರ ಕಿವಿಯಲ್ಲಿ ಪಿಸುಗುಟ್ಟಿದನು. ಆದರೆ, ಅಧ್ಯಕ್ಷರು ತಮ್ಮ ಭಾಷಣವನ್ನು ಮೊದಲೆ ಮುಗಿಸಿದ್ದರೆಂದು ಪುಂಡ ರೀಕನಿಗೆಲ್ಲಿ ಗೊತ್ತು? ಭಾಷಣಕ್ಕೂ ನಾಟಕಕ್ಕೂ ಮಧ್ಯೆನಿಂತ ಅಧ್ಯಕ್ಷನು ಎಂದಾದರೂ ಜೀವವನ್ನು ಕೈಯಲ್ಲಿಯೆ ಹಿಡಿದು ನಿಲ್ಲಬೇಕಾಗಿತ್ತು ಎಂಬುದು ಅಧ್ಯಕ್ಷರಿಗೆ ಗೊತ್ತಲ್ಲದೆ—ಸೂತ್ರಧಾರಿ ಪುಂಡರೀಕನಿಗೆ ಹೇಗೆ ಗೊತ್ತು?

ಪುಂಡರೀಕನು ರಂಗಭೂಮಿಯ ಒಳಗೆ ಬಂದು, ''ನಾಟಕಕ್ಕೆ ಸಿದ್ಧ ಮಾಡಿದ್ದೀರಿ. ಪಾತ್ರಧಾರಿಗಳು ವೇಷಧಾರಿಗಳಾಗಿಲ್ಲ. ವೇಷಧಾರಿಗಳು ಪಾತ್ರಧಾರಿಗಳಾಗಿಲ್ಲ. ಆದ್ದರಿಂದ ಇಂದು ನಾಟಕವಿಲ್ಲ. ಹೀಗೆಂದೇ ತಿಳಿಸಿದ್ದೇನೆ," ಎಂದು ಜವಾಬುದಾರೀ ಮಾತನ್ನು—ಶಾಲೆಯ ಉಪಾಧ್ಯಾ ಯನು ತರಗತಿಯ ಮಕ್ಕಳೊಡನೆ ಉಡಾಯಿಸುವ ಹಾಗೆ—ಹೇಳಿಬಿಟ್ಟನು. ಮಲ್ಲಿಯ ಮುಖ ಕೆಂಪಗಾಯಿತು. ಮಾದಪ್ಪನ ಹುಬ್ಬು ಗಂಟಿಕ್ಕಿತು.

"ಯಾರು ನೀನು ನಮಗೆ ಹೇಳಲಿಕ್ಕೆ?" ಎಂದು ಎಲ್ಲವರೂ ಪುಂಡ ರೀಕನನ್ನು ಗದರಿಸಿಬಿಟ್ಟರು. ಪಾಪದ ಪುಂಡರೀಕನು ಚಕಿತನಾಗಿ ಮೇಲೆ ಕೆಳಗೆ ನೋಡಿದನು. ಆತನು ಪಿಟ್ಟೆಂದು ಮಾತನಾಡುವುದರೊಳಗೆ ನಾಟಕಕ್ಕೆ ಪ್ರಾರಂಭವೆ ಆಗಿಬಿಟ್ಟಿತು.

"ನಾಟಕದ ಅಂತ್ಯದ ವರೆಗೆ ರಂಗಭೂಮಿಯ ಜವಾಬುದಾರಿ ನಮ್ಮದು," ಎಂದು ಮಲ್ಲಿ ಪುಂಡರೀಕನಿಗೆ ತಿಳಿಸಿದನು. ಪುಂಡರೀಕನು ರಂಗ ಭೂಮಿಯ ಹಿಂಭಾಗದಲ್ಲಿ ನಾಟಕದ ಸಿದ್ಧತೆಯ ಮೇಜಿನ ಮೇಲೆ ಹೋಗಿ ಕೂತುಬಿಟ್ಟನು.

ಫರದೆಯ ಹಿಂದಿನಿಂದ ಮಲ್ಲಿಯೂ ರಂಗಭೂಮಿಯ ಎದುರಿಗ ಹಾರು ವಾಗ, ಅದೇ ತಾನೇ ಮುಕ್ತಾಯಭಾಷಣಕ್ಕಾಗಿ, ಕೃತಜ್ಞತಾಸಮರ್ಪಣೆ ಗಾಗಿ ಎದ್ದುನಿಂತ ಅಧ್ಯಕ್ಷರು ತಮ್ಮ ಆಸನವನ್ನು ಬಿಟ್ಟು ಸಭಾಂಗಣಕ್ಕೆ

ಇಳಿದು ಬಿಟ್ಟಿದ್ದರು. ಅಧ್ಯಕ್ಷರ ಕೊನೆಭಾಷಣ ತಮ್ಮ ಉತ್ಸುಕತೆಯನ್ನು ಭಂಗಮಾಡಿಲ್ಲವೆಂದು, ಕಿಕ್ಕಿರಿದು ನೆರೆದ ಜನರ ಸ್ತೋಮವು ಕೈಕೈ ಚಪ್ಪಾಳೆ ಹೊಡೆದು ನಾಟಕದ ಪ್ರಾರಂಭವು ಶಿಸ್ತಿನ ಭಂಗವಾಗಿಯೇ ಉಂಟಾಗಿದೆ ಯೆಂದು ಯಾರಿಗೂ ತಿಳಿಯದಂತೆ ಮಾಡಿಬಿಟ್ಟಿತು.' ಜನ ಮರುಳೋ? ಜಾತ್ರೆ ಮರುಳೋ'? ಎಂಬ ಅಚ್ಚಗನ್ನಡದ ಗಾದೆ ಪುಂಡರೀಕನಂತವರಿಗೆ ಅರಿವಾಗ ಬೇಕಲ್ಲದೆ, ಎರಡು ಭಾಷಣಗಳನ್ನು ಕೇಳಿ, ಸ್ವಲ್ಪ ಮಟ್ಟಿಗೆ ನಿನ್ನೆಗಿಂತ ಈ ಹೊತ್ತು ಬುದ್ಧಿಯಲ್ಲಿಯೂ ಜ್ಞಾನದಲ್ಲಿಯೂ ಭಾರ ಹೆಚ್ಚಿದ ಸಭಿಕರಿಗೆ ತಿಳಿಯಬೇಕೆ? ಸಭಿಕರಿಗೆ ಬೇಕು ವಿನೋದ; ನಾಟಕ. ಯಾರಿಗೆ ಭಾಷಣವು ಬೇಕಾಗಿದೆ?

ಮಲ್ಲಿಯೊಡನೆ ಜಗ್ಗನೂ ಬಂದನು. ಜಗ್ಗನೊಡನೆ ಮಾದಪ್ಪನೂ ಬಂದನು. ವೇಷಧಾರಿಗಳು ಕಥಾನುಸಂಧಾನಕ್ಕೆ ಕ್ರಮವಾಗಿ ರಂಗ ಭೂಮಿಗೆ ಬಂದು ನೆರೆದ ಸಭಿಕರನ್ನು ಆನಂದಸಾಮ್ರಾಜ್ಯದಲ್ಲಿ ಓಲಾಡಿಸಿ, ದುಃಖಸಾಗರದಲ್ಲಿ ಮುಳುಗಾಡಿಸಿ, ವಿಚಾರದಪಂಥಾನದಲ್ಲಿ ನಡೆಯಿಸಿ ವಿಮರ್ಶೆಯ ಯಾನದಲ್ಲಿ ತಿರುಗಾಡಿಸಿ ಕೃತಕೃತ್ಯರಾಗಿ ಬಿಟ್ಟರು. ನಾಟಕದ ಹೆಸರೇನೋ 'ಯಮನ ಸೋಲು.' ಆದರೆ ಅದರಲ್ಲಿ ಯಮನು ಏಕೆ ಬಂದಿಲ್ಲ? ಸಾವಿತ್ರೀ ಸತ್ಯವಾನರೇಕೆ ಕಾಣೆ? ಎಂದು ಯಾರಿಗೂ ತೋಚಲಿಲ್ಲ. ಕಥಾ ನಾಯಕನು ಬ್ರಹ್ಮನ ಹೊಟ್ಟೆಯನ್ನು ಹೊಕ್ಕು ಯಮನಿಗೆ ಮುಂಜಿಕಟ್ಟಿ ಬಂದಷ್ಟು ಸಾಹಸಿಯೇನೋ ಅಹುದು; ಆದರೆ ಆ ನಾಟಕದಷ್ಟು ಕೃತ ಕೃತ್ಯವಾದ ನಾಟಕ ಮಂಗಳೂರಿನಲ್ಲಿ ಹಿಂದೆ ಎಂದೂ ಆಗಿಲ್ಲ; ಮುಂದೆ ಎಂದೂ ಆಗದು. ನಾಟಕದ ಅಂತ್ಯದೊಡನೆ ಮಲ್ಲಿ, ಜಗ್ಗ, ಮಾದಪ್ಪ ಎಲ್ಲವರೂ ಪುಂಡರೀಕನನ್ನು ಬಳಸಿನಿಂತು, "ಈ ನಾಟಕದ ಹೆಸರು 'ಪುಂಡರೀ ಕನ ಗೆಲುವು!' " ಎಂದು ಕೂಗಿ ಬಿಟ್ಟರು. ಜಗ್ಗನು ಮಲ್ಲಿಗೆ ಹಸ್ತಲಾಘವ ವನ್ನಿತ್ತನು.

ಮುಕ್ತಾಯಭಾಷಣವನ್ನು ಪ್ರಾರಂಭಮಾಡದೆ, ಅದನ್ನು ಮುಗಿಸಲಿ ಕ್ಕಾಗದ ಅಧ್ಯಕ್ಷರು ಮರುದಿನ ವರ್ತಮಾನವೆಲ್ಲವನ್ನು ಕೇಳಿ, ತಾನು ಆಸನ ವನ್ನು ಬಿಡದೆ ಅಲ್ಲಿಯೆ ಇರುತಿದ್ದಿದ್ದರೆ, ವೇಷಧಾರಿಗಳೊಡನೆ ವೇಷಧಾರಿ ಯಾಗಿ ಕುಣಿಯಬೇಕಾಗುತಿತ್ತೇನೋ ಎಂದು ನಕ್ಕು ನುಡಿದಾಗ—ಮಲ್ಲಿ ಯೂ, ಜಗ್ಗನೂ, ಮಾದಪ್ಪನೂ, "ನಾವು ಪ್ರಾರ್ಥನೆಮಾಡದೆ ಫರದೆಯ

ನ್ನೇರಿಸದೆ ನಾಟಕವನ್ನು ಆಡಿಬಿಟ್ಟಿವೇ?—ಶಾಂತಂ ಪಾಪಂ! ಶಾಂತಂ ಪಾಪಂ!" ಎಂದು ಕಿವಿ ಮುಚ್ಚಿಕೊಂಡರು—ಕಣ್ಣು ಮುಲಗಿಸಿಬಿಟ್ಟರು.

## ೭. ನನ್ನ ಸ್ನೇಹಿತರು

ನನ್ನ ಸ್ನೇಹಿತರೀಗ ನನ್ನಿಂದ ದೂರಕ್ಕೆ ಸರಿಯುತಿದ್ದಾರೆ. ಉದ್ದವಾದ ಮಾರ್ಗಗಳ ಸಂದುಗಳಲ್ಲಿ, ವಿಶಾಲವಾದ ಮೈದಾನುಗಳ ಮಧ್ಯದಲ್ಲಿ ನಿಂತು ನನ್ನೊಡನೆ ಮಾತನಾಡಿ, ನನ್ನನ್ನು ಮಾತನಾಡಿಸುವವರು, ನನ್ನ ಟೊಪ್ಪಿಯ ಕಪ್ಪು ಬಣ್ಣವನ್ನು ಕಂಡೊಡನೆ ಇನ್ನೊಂದೆಡೆಗೆ ನುಸುಳುತಿದ್ದಾರೆ. ಇದೇಕೆ ಹೀಗಾಗುತ್ತದೆಂಬುದು ನನಗೊಂದು ದೊಡ್ಡ ಸಮಸ್ಯೆಯಾಗಿ ಬಿಟ್ಟದೆ. ಮಹಾತ್ಮಾ ಗಾಂಧಿಯವರು ಉಪವಾಸವ್ರತವನ್ನು ಕೈಗೊಂಡು ಜೀವನ ಮೃತ್ಯುಗಳ ಅಂತರದಲ್ಲಿ ತೂಗುತಿದ್ದಾಗ ಲಿನ್‌ಲಿತ್‌ಗೋ ಪ್ರಭುಗಳಿಗೂ ಅಂತಹ ಬಗೆಹರಿಯಲಾರದ ಸಮಸ್ಯೆ ಆಗಲಿಕ್ಕಿಲ್ಲ. ನಮ್ಮೂರ ಕ್ಲಬ್ಬಿನವರು ರಾತ್ರಿಯೆಲ್ಲ ಬೆಳಗಾಗುವ ವರೆಗೆ ಇಸ್ಪೀಟು ಆಡಿ, ಇನ್ನೂ ಇಸ್ಪೀಟು ಆಡುತ್ತ ಇದ್ದವರು,—ಆಗಲೆ ಕಾಫಿ ಕುಡಿಯಬೇಕಾದರೆ, ಬೆಳಗಿನ ಹಲ್ಲುಜ್ಜಿ ಮುಖ ಪ್ರಕ್ಷಾಲನ ಮಾಡಿಕೊಂಡೇ ಆಗಬೇಕೆ,ಹಲ್ಲುಜ್ಜದೆ ಕಾಫಿ ಕುಡಿದರೆ ಶಾಸ್ತ್ರಕ್ಕೆ ವಿರೋಧವಾಗದಿರಬಹುದೆ?—ಎಂಬ ಸಮಸ್ಯೆಯನ್ನು ಬಿಡಿಸಲು ಕಷ್ಟವಾಗು ವಷ್ಟು ಜಟಿಲವೆಂದು ಎಣಿಸಿದ್ದರೆಂದು ಕೇಳಿದ್ದೆ. ಇದು ಕೂಡ ಅಷ್ಟೆ ಜಟಿಲ ವಾಗಿದ್ದ ಸಮಸ್ಯೆ. ಈ ಸಮಸ್ಯೆ ನನಗುಂಟಾದಂದಿನಿಂದ ಅವರು ನನ್ನಿಂದ ಒಂದು ಫರ್ಲಾಂಗು ದೂರವಿರಲು ಇಚ್ಛಿಸುವುದಾದರೆ, ಒಂದು ಮೈಲಿನಷ್ಟು ಆಚೆ ನಡೆದುಬಿಡುತಿದ್ದೇನೆ. ಒಮ್ಮೊಮ್ಮೆ ಅವರ ಬದಿಯಾಗಿಯೆ ಏನೋ ಒಂದು ಸಂಸ್ಕೃತದ ಶ್ಲೋಕವನ್ನೋ ಸಿನೇಮದ ಹಾಡನ್ನೋ ಮನಸ್ಸಿನಲ್ಲೆ ನುಡಿ ಯುತ್ತ ನಡೆಯುತಿದ್ದೇನೆ. ಹೀಗಿದ್ದು ನಮಸ್ಯೆ ಸಮಸ್ಯೆಯಾಗಿಯೆ ಉಳಿದಿದೆ. ಕಡೆವರೆಗೂ ಹಾಗೆಯೇ ಉಳಿಯಬಹುದು.

ನಾನು ಒಂದು ಕಾಲದಲ್ಲಿ ಕವಿ ಸಂಘದ ಸದಸ್ಯನಾಗಿದ್ದುದರಿಂದಲೋ ನ್ಯಾಯಮೂರ್ತಿಯ ಏಕಮಾತ್ರ ಮಿತ್ರನಾಗಿದ್ದುದರಿಂದಲೋ ಅನೇಕರ ಮನ್ನಣೆಗೆ ಪಾತ್ರನಾಗಿದ್ದೆನು. ಮಂಗಳೂರಿನ ಅತ್ಯುಚ್ಚಪ್ರತಿಭಾಶಾಲಿ ವಾಗ್ಮಿ ನಾರ್ಣಪ್ಪನೂ ಮಾರ್ಗದಲ್ಲ ಸಿಕ್ಕಿದಾಗಲೆಲ್ಲ ನನಗೆ ನಮಸ್ಕಾರ ಮಾಡುತಿದ್ದನು. ಹಾಗೆಯೇ ಕೋದಂಡನು ಆ ನಮಸ್ಕಾರವನ್ನು ಹಿಂದಕ್ಕೆ

ಮರಳಿಸುತ್ತಿದ್ದನು. ಆದರೆ, ಈ ಪರಿಚಯ ಹಲವು ಸಮಯದ ವರೆಗೆ ನಡೆದು ಬಂದು, ಅದರನಂತರ ಏನಾಯಿತೋ, ಏನು ನಡೆಯಿತೋ, ಸರಿಯಾದ ಸಂಗತಿಯು ನೆನಪಿಲ್ಲ---ನಾನೇ ನಾರ್ಣಪ್ಪನಿಗೆ ಮೊದಲು ನಮಸ್ಕಾರ ಮಾಡಬೇಕಾಯಿತು; ನಾರ್ಣಪ್ಪನು ಅದನ್ನು ಹಿಂದಕ್ಕೆ ಮರಳಿಸುವ ವಾಡಿಕೆಗೆ ಮೊದಲಾಯಿತು. ಹೇಗಿದ್ದರೂ ಇಂದಿನ ದಿವಸಕ್ಕೂ ಕೋದಂಡ ನಾರ್ಣಪ್ಪರ ಪರಿಚಯವು ಮಾರ್ಗದಲ್ಲಿ ಸಿಕ್ಕಿದಾಗ ನಮಸ್ಕಾರದಲ್ಲಿಯೇ ಮುಗಿಯುತ್ತದೆ. ಈ ತರದ ಸ್ನೇಹಿತರು ಮಾತ್ರ ನನ್ನಿಂದ ದೂರ ಸರಿಯುತ್ತಿಲ್ಲ. ಒಂದು ಸಲ ನಾರ್ಣಪ್ಪನನ್ನು ಸಂಧಿಸಿದಾಗ, ಆತನನ್ನು ನಿಲ್ಲಿಸಿ ಆತನ ಕುಲಗೋತ್ರಗಳನ್ನೂ ಅವನಿರುವ ವಾಸಸ್ಥಾನವನ್ನೂ ಕೇಳಬೇಕೆಂದಿದ್ದೇನೆ. ಹಾಗೆಂದು ಈ ವಿಚಾರಗಳೊಡನೆ ಆತನ ಉದ್ಯೋಗವೇನೆಂದು ಕೇಳಲಾರೆನು. ಏತಕ್ಕೆಂದರೆ, ಆತನ ಉದ್ಯೋಗವು ಮುನ್ಸಿಪಲ್ ದೀಪದ ಕಂಬಗಳನ್ನು ಲೆಕ್ಕ ಮಾಡುವುದೇ ಆಗಿರುತ್ತದೆಂದು ಒಮ್ಮೆ ಯಾರೋ ಹೇಳಿದಂತೆ ನೆನಪಿದೆ. ಆದರೆ, ಅಂತಹವರಿಂದಲೆ ಲೋಕಸಂಗ್ರಹದ ಕಾರ್ಯವು ನಿಜವಾಗಿಯೂ ಆಗುತ್ತದಲ್ಲದೆ, ಏನೋ ಒಂದು ಉದ್ಯೋಗದಲ್ಲಿದ್ದು ಬಿಡುಹೊತ್ತಿನಲ್ಲಿ ಆ ಸಂಘವನ್ನು ಈ ಸಂಘವನ್ನು ಕಟ್ಟಿಕೊಂಡು ಕೆಲಸ ಮಾಡುವವರಿಗೆ ಆಗುತ್ತಿಲ್ಲವೆಂಬುದು ಕಂಡಿತ. ಶಾಲೆಯ ಉಪಾಧ್ಯಾಯನಾಗಿದ್ದು ಬೆಳಗಿನಿಂದ ಸಂಜೆಯ ತನಕ ಹುಡುಗರೊಡನೆ ಹುಡುಗನಾಗಿ ವರ್ತಿಸುವವರು ಏನು ಮಹಾ ಮಾಡಲಾಪರು? ನೀವೇ ಆಲೋಚಿಸಿ. ಶಾಲಾ ಉಪಾಧ್ಯಾಯರ ಮಾನಸಿಕ ಬೆಳವಣಿಗೆಗೂ, ಅವರು ಕಲಿಸುತ್ತಿರುವ ವಿದ್ಯಾರ್ಥಿಗಳ ಮಾನಸಿಕ ಅಭಿವೃದ್ಧಿಗೂ ಹೆಚ್ಚಿನ ಅಂತರವಿರಲಾರದು. ಉಪಾಧ್ಯಾಯನ ಮನೆಯಲ್ಲಿ ಒಂದು ದಿನ ಅತಿಥಿಯಾಗಿ ಬನ್ನಿರಿ. ಆ ಉಪಾಧ್ಯಾಯನು ಶಾಲೆಗೆ ಹೊರಡುವ ಮುಂಚೆ ಗಂಜಿಯೂಟ, ಮಧ್ಯಾಹ್ನದ ಬಿಡುವಿನಲ್ಲಿ ಒಂದು ಗಟ್ಟಿಯೂಟ, ಸಾಯಂಕಾಲದಲ್ಲಿ ಕಾಫಿ ಫಲಾಹಾರ, ರಾತ್ರೆಯೊಂದು ಊಟ ಹೀಗೆ ಕ್ರಮವನ್ನಾಗಿ ಇಟ್ಟುಕೊಂಡಿರುವುದನ್ನು ಕಾಣುವಿರಿ. ಮಧ್ಯಾಹ್ನದ ಬಿಸಿಲಿಗೆ ಹುಡುಗರೊಡನೆ ಓಡಿಕೊಂಡು ಬಂದು, ಊಟವನ್ನು ಮುಗಿಸಿದಂತೆ ಮಾಡಿಕೊಂಡು ತಿರಿಗೊಮ್ಮೆ ಓಡುವನು. ಮನೆಯ ವ್ಯವಸ್ಥೆಯಲ್ಲಿಯಂತೂ ಆತನು ಯಾರಿಗೂ—ಕಿರಿಯರಿಗೂ, ಹೆಂಡತಿಗೂ, ಮಕ್ಕಳಿಗೂ—ಒಬ್ಬ ಶಾಲೆಯ ಹುಡುಗನಂತೆ ಎಮೆಚೂರ್-ಅಷ್ಟೆ! ವಕೀಲಿ ವೃತ್ತಿಯವರಾಗಲಿ, ಡಾಕ್ಟ್ರು ವೃತ್ತಿಯವರಾಗಲಿ, ಅಂಗಡಿ ವೃತ್ತಿಯವರಾಗಲಿ—ಎಲ್ಲವರು ಬಿಡು

ರಾತ್ರಿನಲ್ಲಿ ಮಾಡುವ ಕೆಲಸ ಎಷ್ಟೆಂದರೆ ಅಷ್ಟೆ! ಆದರೆ, ಹಾಗೆಂದು ನಾನು ಹಾರರನ್ನೂ ತಿಳಿಳುವುದಿಲ್ಲ. ನಾನು ಕೆಲವರನ್ನು ಕಂಡಿರುವೆನು, ವಿರಾಮ ಲ್ಲಿ ಶ್ರಮವನ್ನೂ, ಶ್ರಮದಲ್ಲಿ ವಿರಾಮವನ್ನೂ ಬಲ್ಲವರನ್ನು. ಕರ್ಮದಲ್ಲಿ ೀಡೆಯನ್ನೂ, ಕ್ರೀಡೆಯಲ್ಲಿ ಕರ್ಮವನ್ನೂ ಕಾಣುವವರನ್ನು.

ನಾರ್ಣಪ್ಪನನ್ನೊಮ್ಮೆ ಸಮೀಪದಲ್ಲಿಯೆ ಇರುವ ಕಾಫಿಭವನಕ್ಕೆ ರಾಂಡೊಯ್ದು, ಬೆಲ್ಲದ ಕಾಫಿಯನ್ನು ಕುಡಿಯಿಸಿ, 'ಇದು ಸಕ್ಕರೆ ಕಾಫಿ, ನ್ನಾಗಿದೆ'ಯೆಂದು ಅವನಿಂದ ಉದ್ಗಾರವನ್ನು ತೆಗೆಯಿಸಿ—ಅವನ ಸ್ನೇಹ ನ್ನು ಕಟ್ಟಿಕೊಳ್ಳಬೇಕು ಎಂಬ ಈ ಮಹತ್ವಾಕಾಂಕ್ಷೆಯನ್ನು ಇಟ್ಟು ರಾಂಡಿದ್ದೇನೆ. ಈ ಮಹತ್ವಾಕಾಂಕ್ಷೆಯನ್ನು ಬರುವ ಸಲವೇ ನಾರ್ಣಪ್ಪನು ಕ್ಕಿದಾಗ, ಕೈಗೂಡಿಸಬೇಕೆಂದಿದ್ದೇನೆ. ಕೈಗೂಡಿಸಿ, ದೂರ ಸರಿಯುವ ಸ್ನೇ ತರ ವಿಚಾರವನ್ನು ಹೇಳುವಾಗ ಅಲ್ಲಿಯೇ ಇನ್ನೊಂದು ಮೇಜಿನೆದುರು ಆ ೀಹಿತರೇ ಇರುವುದಾದರೆ ಹೇಗೆ? ಒಳಿತೆ- ಏತಕ್ಕೆಂದರೆ, ಸ್ನೇಹವೆಂಬುದು ಣ್ಣೆಯನ್ನುತ್ತಾರೆ. ಈಗ ಕಾಫಿಭವನದಲ್ಲಿ ಸಿಕ್ಕುವಂತಹುದು ಎಣ್ಣೆಯ ಂಡಿಗಳು, ತುಪ್ಪದ ವಾಸನೆಯುಳ್ಳ ಸಿಹಿ ತಿಂಡಿಗಳು ಅಲ್ಲವೆ? ನಾರ್ಣಪ್ಪನೆ! ನಾವಾಗ ನನ್ನನ್ನು ಸಂಧಿಸುವಿ: ನೀನು ವಾಗ್ಮಿಯಾಗಿ, ಆಲಿಸುವ ಸಹ ಸ್ರರು ಜನರಿಗೆ ಬೇಕಾದ ಬೇಡವಾದ ಸಂಗತಿಗಳೆಲ್ಲವನ್ನು ಧಾರಾಕಾರವಾಗಿ ರಿಸಿದ್ದಿಯೆ? ತುಂತುರು ತುಂತುರು ನಾಲ್ಕು ಮಾತುಗಳನ್ನು ನೀನು ನನ್ನಿಂದ ೀಳುವಿಯೆ?

ಸ್ನೇಹವೆಂಬುದು ಎಣ್ಣೆಯೆನ್ನುತ್ತಾರೆ. ಸಹಜ, ಅದು ಎಣ್ಣೆಯ ಹಾಗೆ ೃಗೆ ಸವರಿರುತ್ತದೆ. ಸೀಗೆಯಿಂದಲೂ ಅದು ಹೋಗಲಾರದು. ಸೀಗೆಯ ಯೋಗವಾದೊಡನೆ, ಎಣ್ಣೆಯು ರೋಮಕೂಪಗಳಿಂದ ಸ್ನಾಯುಗಳನ್ನು ಿರುತ್ತದೆಯೆನ್ನುತ್ತಾರೆ. ಆ ಮಾತು ಅಕ್ಷರಶಃ ನಿಜವಾಗಿದೆ. ಕೆಲವು ವರ್ಷ ಳ ಹಿಂದೆ, ನಾನೊಬ್ಬ ಹೊಸ ಗೆಳೆಯನನ್ನು ಸಂಪಾದಿಸಿದ್ದೆ. ಅವನ ನೆನಪು ಂದಿನ ದಿವಸಕ್ಕೂ ನನ್ನ ಸ್ನಾಯುಗಳಲ್ಲಿ ಹೂತುಕೊಂಡಿರುತ್ತದೆ. ಅವನ ಾಪವಿನ್ಯಾಸವು ನೆನಪಿನ ಗುಹೆಯಿಂದ ಹೊಂಚು ಹಾಕಿ, ಹೊರಗೆ ಇಣಿಕು ದೆ. ತಲೆಗೊಂದು ಕೆಂಪು ಬಣ್ಣದ ಬೈರಾಸನ್ನು ಸುತ್ತಿ, ಕಾಲುಗಳನ್ನು ಕೆಳಗೆ ಳಿಯಿಸಿ, ಒಂದು ದೊರಗು ಕಲ್ಲಿನ ಮೇಲೆ ಕೂತಿದ್ದವನನ್ನು ಕಂಡಾಗ ನನ ಾಬ್ಬ ಹೊಸ ಗೆಳೆಯ ಸಿಕ್ಕಿದ್ದನು. ಪಟ್ಟಣದ ಬೇಸರದಿಂದ ತಪ್ಪಿ ಬಿಸಿಲಿನಲ್ಲಿ ಾಜಮಾರ್ಗವಾಗಿ ನಡೆದು, ನಂತರ ಗದ್ದೆಯ ಹುಣಿಗಳನ್ನು ಹಿಡಿದು ಕದಿ

ರೆಯ ಗುಡ್ಡೆಯನ್ನು ಮುಟ್ಟಿದಾಗ ಅಲ್ಲಿಯ ಮರವೊಂದರ ಶ್ಯಾಮಶೀತಲ ಛಾಯೆಯಲ್ಲಿ ಕುಳಿತಿದ್ದವನು ನನಗೆ ಚಿರಕಾಲವುಳಿದು ಬರುವ ಸ್ನೇಹಿತನಾಗುವನು ಎಂದು ನಾನು ಆಗ ತಿಳಿದಿರಬಹುದೆ? ಎಷ್ಟೋ ಸ್ನೇಹಿತರೊಡನೆ ತಿರುಗಾಡಿದ್ದೇನೆ.ತಮ್ಮ ಮನೆಗಳಿಂದ ಹೊರ ಬರುವಾಗಲಷ್ಟೆ ಗಂಧದ ಸಾಬೂನಿನಿಂದ ಮುಖ ತೊಳೆದು ಜೊತೆ ಸೇರಿದ ಸ್ನೇಹಿತರಿದ್ದಾರೆ. ಮಧ್ಯಾಹ್ನದ ಹೊತ್ತು ಊಟಮುಗಿಸಿ, ತುಪ್ಪದ ಕಣವೊಂದನ್ನು ತಮ್ಮ ಮೀಸೆಯ ತುದಿಗೆ ಸವರಿ ದೌಲತ್ತುಮಾಡುವ ಸ್ನೇಹಿತರಿದ್ದಾರೆ. ‘‘ಮೊನ್ನೆ ಕೊಂಡ ಮೂರಾಣೆ ಕೊಡಲಿದೆ, ಇನ್ನು ಒಂದಾಣೆ ಕೊಡು, ಕೂಡಿಸಿ ನಾಲ್ಕಾಣೆ ವಾವಲಿ ಕೊಡುತ್ತೇನೆ. ನೀನುಮಾತ್ರ ಸ್ವಲ್ಪ ನೆನಪು ಹುಟ್ಟಿಸು!’’ ಎಂದು ಹೇಳುವ ಸ್ನೇಹಿತರಿದ್ದಾರೆ.ಆದರೆ, ನನಗಂದು ಲಾಭವಾದ ಸ್ನೇಹಿತನು ನನ್ನ ಪರಮ ಭಾಗ್ಯದಿಂವಲೆ ಸಿಕ್ಕಿದವನು. ಆತನು ಬರೀ ಒಂದು ಸಲ ಮಾತ್ರ ಭೇಟಿ ಕೊಟ್ಟು—ಇಂದಿನ ದಿವಸಕ್ಕೂ ನನ್ನನ್ನು ಕೇವಲಿಯನ್ನಾಗಿ ಮಾಡಿರುತ್ತಾನೆಂಬುದೇ ದುಃಖದ ವಿಷಯವಾಗಿದೆ.

ಮರದಡಿಯಲ್ಲಿ ಕೂತಿದ್ದೆ. ಕೈಯಲ್ಲೇನೋ ಪುಸ್ತಕವಿತ್ತು. ನೆರಳು ಕೂತ ಗುಡ್ಡದ ಮೇಲೆಲ್ಲ ಹಾಸಿತ್ತು. ಹಕ್ಕಿಗಳ ಕೂಗಾಗಲಿ ಗಾಯನವಾಗಲಿ ಸುಳಿಯುತಿದ್ದಿಲ್ಲ. ದೂರದ ಸಾಗರ ನೀಲವಾಗಿಯೇ ಕಾಣುತಿತ್ತು. ಅದರ ಬದಿಯ ಮರಗಿಡ ನೆಟ್ಟಗಾಗಿಯೇ ನಿಂತಿತ್ತು.

‘‘ಗಂಟೆಯೆಷ್ಟಾಯಿತು, ಸ್ವಾಮಿ?’’ ಎಂದವನು ಮಾತು ಮೊದಲು ಮಾಡಿದನೆ.

“ಏನೋ! ತಿಳಿಯದು. ಆರಾಗಿರಬಹುದು,” ಎಂದು ಉತ್ತರವಿತ್ತಾಗ ಆತನಿಗೇಕೆ ನಿಷ್ಪ್ರಯೋಜನದ ವಿಚಾರವನ್ನು ಕೊಡುತಿದ್ದೇನೆಂದು ಮನಸ್ಸಿನಲ್ಲಿಯೆ ಬೇಸರಪಟ್ಟೆನು. ಅದರ ನಂತರ ಅವನ ಊರು, ಅವನ ಉದ್ಯೋಗ, ಅವನ ಕ್ಷೇಮಾಚಾರ—ಇವುಗಳನ್ನು ಒಂದೊಂದಾಗಿ ಕೇಳಿದೆನು ‘‘ನಾನು ಪರವೂರವನು, ಹೆಸರು ಚಂಡ್ಯ. ಸ್ವಲ್ಪ ನಾಗುವಳ್ಳಿಯಿದೆ. ಮದ್ದಿಗಾಗಿ ಡಾಕ್ಟರ್ ಅಡಪ್ಪರಲ್ಲಿ ಬಂದವನು,” ಎಂದು ಮೊದಲಾಗಿ ಹೇಳಿದನು. ಸಾಯಂಕಾಲವಾಗುತ್ತ ಬಂದಿತ್ತು. ನಾನಾರೆಂದು ಆತನಿಗೆ ಹೇಳಬೇಕಾಯಿತು. ಹೇಳಿದ ನಂತರ “ಸ್ವಾಮಿ, ಒಂದೆರಡಾಣೆ ಇದ್ದರೆ ಕೊಡುತ್ತೀರಾ? ನಾನಿಂದು ಉಪವಾಸ,” ಎಂದು ತನ್ನ ಮನಸ್ಸನ್ನೆಲ್ಲ ಹತ್ತಿಗಿಂತ ಹಗುರಗೈದನು ಆತನು.

"ಇರಲಿಕ್ಕೆ ಎರಡಾಣೆಯಿದೆ, ನೋಡು. ಆದರೆ ನನಗೆ ಕಾಲ್ನೋವು ಇದೆ. ಹಿಂದಕ್ಕೆ ಹೋಗುವಾಗ ಸಿಟಿ ಬಸ್ಸಿನಲ್ಲಿ ಕೂತು ಹೋಗಬೇಕೆಂದಿರುವೆನು," ಎಂದೇ ನನ್ನ ಖಂಡತುಂಡವಾದ ಉತ್ತರ ಬಂದರೂ ಆತನಿಗೆ ಅದು ವಿಶೇಷವಾಗಿ ತೋರಲಿಲ್ಲ. ದೂರದ ಸಾಗರವನ್ನು ಇನ್ನೂ ಶೂನ್ಯ ದೃಷ್ಟಿಯಿಂದಲೆ ನೋಡುತಿದ್ದನು, ಮತ್ತೇನನ್ನೋ ನನ್ನೊಡನೆ ವಿಚಾರಿಸಿದನು. ಕತ್ತಲು ಹರಿಯುತಿದ್ದುದರಿಂದ, ನಾನು ಮತ್ತೆ ಎದ್ದು ನಿಂತೆನು.

"ಸ್ವಾಮಿ, ಆ ಎರಡಾಣೆ ನನಗೆ ಕೊಡುವಿರಾ," ಎಂದು ಬಂದಿತು ತಿರಿಗಿ ಪ್ರಶ್ನೆ.

ನಾನೆಂದೆ, "ನನಗದು ಅಗತ್ಯವಿದೆ; ಕಾಲ್ನೋವು ಇದೆಯೆಂದೆನಲ್ಲ!"

"ನಾನಿಂದು ಊಟ ಮಾಡಿಲ್ಲ, ಕೊಟ್ಟರೆ ಉಪಕಾರ."

"ನಾನಷ್ಟು ಹೇಳಿದ ನಂತರ ನೀನು ಕೇಳ್ಬಾರದಯ್ಯ!"

"ಸ್ವಾಮಿ, ಆ ಎರಡಾಣೆ ನನಗೆ ಕೊಡುವಿರಾ?"

ಎರಡಾಣೆಯ ನಿಕ್ಕಲ್ ಪಾವಲಿಯನ್ನು ಎಸೆದುಬಿಟ್ಟೆನು. ಹಾಗೆ ಎಸೆದುಬಿಟ್ಟದಕ್ಕೆ ಇಂದಿಗೂ ನನಗೆ ಬೇಸರವಿದೆ. ಆ ಸಮಯದಲ್ಲಿ ಒಂದು ದುರಾಗ್ರಹವೆ ನನ್ನನ್ನು ಮುಸುಕಿತ್ತು. ನಡೆದೇ ಮನೆಗೆ ಹೋದೆನು. ಯಾರೊಡನಾದರೂ ಕಡ ಕೇಳಿ ಬಸ್ಸಿನಲ್ಲಿ ಹೋಗಬಹುದಿತ್ತು. ಅಥವಾ ಸಿಟಿ ಬಸ್ಸಿನ ಕಂಡಕ್ಟರನ ಮುಂದೆ ಪ್ರಯಾಣದ ಅಂತ್ಯದಲ್ಲಿ ಹಣದ ಚೀಲವನ್ನು ತೆಗೆದು ಅದನ್ನು ಮೇಲ್ ಕೆಳಗೆ ನೋಡಿ, ಆ ಕಿಸೆ ಈ ಕಿಸೆ ಮುಟ್ಟಿ, "ಇಲ್ಲ, ಮಾರಾಯಾ!" ಎಂದವನನ್ನು ಮಂಕುಗೊಳಿಸಿ ಮನೆಗೆ ಮುಟ್ಟಬಹುದಿತ್ತು. ನಡೆದೇ ಹೋದೆನು. ಕುಂಟುತ್ತಾ ಹೋದೆನು. ನಾಲ್ಕು ದಿವಸಗಳಿಗೆ ಮತ್ತೆ ಹೊರನಡೆಯಲಾಗದೆ ಆರಾಮಕುರ್ಚಿಯನ್ನೇ ಹಿಡಿದೆನು.

ನಾರ್ಣಪ್ಪನೊಡನೆ ಸ್ನೇಹವನ್ನು ಕಟ್ಟಿಕೊಳ್ಳಬಲ್ಲೆ ಎಂದು ಭವಿಷ್ಯ ವಿಶ್ವಾಸಿಯಾಗಿ ತುಂಬಾ ಉತ್ಸಾಹವನ್ನು ಕಟ್ಟಿಕೊಂಡಿರುತ್ತೇನೆ. ಹಾಗೆಯೇ ಒಂದೊಮ್ಮೆ ಒಂದು ತಾಸು ನನ್ನೊಡನೆ ಆ ವಿಚಾರ ಈ ವಿಚಾರ ಮಾಡಿ, ನನ್ನಿಂದ ನಿಕ್ಕಲ್ ಪಾವಲಿಯನ್ನು ಪಡೆದು ನಾನು ನಾಲ್ಕು ದಿವಸ ವಿರಾಮ ಪಡೆಯುವಂತೆ ಮಾಡಿದ ಚಂಡ್ಯನ ಮೇಲೆ ನನಗಿರುವ ಗೌರವವು ಚಿರಸ್ಥಾಯಿಯಾಗಿ ಉಳಿಯಬಲ್ಲುದೆಂದೂ ಆಶೆ ಕಟ್ಟಿಕೊಂಡಿರುತ್ತೇನೆ. ಚಂಡ್ಯನು ಇನ್ನೊಮ್ಮೆ ಸಿಕ್ಕುವ ಸಂದರ್ಭವಿಲ್ಲ. ಕಳೆದುಹೋದ ದಿನಗಳ ಅಡಿಯಲ್ಲಿ ಆತನ ಶೂನ್ಯದೃಷ್ಟಿ ದೂರದ ಸಾಗರವನ್ನು ಈಕ್ಷಿಸುತ್ತಿರಬಹುದು.

ನಾರ್ಣಪ್ಪನು ಒಂದಲ್ಲ ಒಂದು ದಿನ ನನಗೆ ಸಿಕ್ಕುವ ಪುಣ್ಯವೊದಗುವುದಿದೆ. ಆತನಿನ್ನು ನನ್ನ ಮಹಾತ್ವಾಕಾಂಕ್ಷೆಯನ್ನು ಬೆಳೆಯಿಸಿಕೊಂಡೇ ನಮ್ಮ ಪರಿಚಯವನ್ನು ನಮಸ್ಕಾರಗಳಲ್ಲಿ ಮುಗಿಸಬಹುದೆಂದು ಎಣಿಸುವುದಿಲ್ಲ. ಒಂದಲ್ಲ ಒಂದು ದಿನ ನಮ್ಮ ನಮಸ್ಕಾರದ ಪರಿಚಯವನ್ನು ಹೊಡೆದು ಹಾಕಿ ಟೊಪ್ಪಿಯ ಗುರುತಿಗೇ ಆತನು ನನ್ನನ್ನು ತಿಳಿದು ಕೊಳ್ಳುವಂತಾಗುವುದೆಂದು ಆಶಿಸುತ್ತಿರುವೆನು.

## ೮. ತಿರಿಗೊಮ್ಮೆ ಅದೇ ವ್ಯಕ್ತಿ!

ನೆರೆಕರೆಯವರಲ್ಲಿ ಒಮ್ಮೆ ರೋಗಿಯ ಅವಸ್ಥೆ ಭಯಂಕರಾವಸ್ಥೆ ತಾಳಿದಾಗ, ತಂತೀಖಾನೆಗೆ ತಂತಿಯೊಂದನ್ನು ಕೊಂಡುಹೋಗಿದ್ದೆ. ವಿಚಾರಿಸಿದಲ್ಲಿ ತಂತಿಯ ರುಸುಮಿನಲ್ಲಿ ಎರಡಾಣೆ ಕಡಿಮೆ ಬಿದ್ದಿತ್ತು. ತಂತಿಯ ಗುಮಾಸ್ತರು ಕಡಿಮೆ ಬಿದ್ದ ಆ ಎರಡಾಣೆಯನ್ನು ತುಂಬಿಸಬಹುದೆಂಬ ನಿರೀಕ್ಷೆಯನ್ನು ನಾನೊಮ್ಮೆ ಮಾಡಿಕೊಂಡರೂ, ಅಪರಿಚಿತರೊಡನೇಕೆ ನಾವು ನಮ್ಮ ಸುಖ ದುಃಖವನ್ನು ತೆರೆಯಬೇಕೆಂದು ಹಿಂತೆಗೆದೆನು. ಹೆಚ್ಚಾಗಿ ಅಂತಹ ಸಂಗತಿಗಳಲ್ಲಿ ಯಾವ ನೌಕರನೂ ದಾನಬುದ್ಧಿಯಿಂದ, ಸೇವಾಧರ್ಮದಿಂದ, ಮುಂದಕ್ಕೆ ಬರುವುದು ವಿರಳ. ಆದರೆ, ಆ ಅಪರ ರಾತ್ರಿಯಲ್ಲಿ ಭಯಂಕರವಾದ ಸಂಗತಿಯನ್ನು ರವಾನಿಸುವುದಿರುವಲ್ಲಿ ಆ ಗುಮಾಸ್ತನು ತಾನಾಗಿಯೇ ಮುಂಬಂದು ನನಗೊಂದು ಕೈನೀಡಬಹುದಿತ್ತು. ಆದರೆ ಅಂತಹ ಲಕ್ಷಣಗಳು ಸ್ಫುಟವಾಗಿ ಆಗಲಿ, ಅಸ್ಫುಟವಾಗಿ ಆಗಲಿ ತೋರದುದರಿಂದ "ನಾನಿನ್ನು ಹತ್ತು ನಿಮಿಷಗಳಲ್ಲಿ ಬರುವೆನೆ"ಂದು ನುಡಿದು-ಮಾರ್ಗಕ್ಕೆ ಕಾಲಿಡುವಾಗ, ಸ್ವಲ್ಪ ದೂರದಲ್ಲಿ ಯಾರೋ ಇಬ್ಬರು ಮಾತನಾಡಿ ನಿಂತಂತೆ ತೋರಿತು. ಅವರ ಸಮೀಪದಿಂದಲೆ ಹಾದುಹೋದೆನು. ಆ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬರು ನನಗೆ ಕೆಲವು ತಿಂಗಳ ಹಿಂದೆ ಏನೋ ಒಂದು ಸಂದರ್ಭದಲ್ಲಿ ಮಾತಾಡಲು ಸಿಕ್ಕಿದ ನಮ್ಮೂರಿನ ಕ್ರೈಸ್ತ ಶ್ರೀಮಂತರೊಬ್ಬರೆಂದು ಹೊಳೆಯಿತು. ಮನೆಯ ಕಡೆಗೆ, ಎರಡಾಣೆಗಾಗಿ ಓಡಲೆ? ಈ ಕ್ರೈಸ್ತರೊಡನೆ ಎರಡಾಣೆಗಾಗಿ ಕೇಳಲೆ? ಆ ಹೊತ್ತಿಗೆ ಕಾಳಿದಾಸನ

'ಯಾಚ್ಞಾ ಮೋಘಾ ವರಮಧಿಗುಣೇ ನಾಧಮೇ ಲಬ್ಧಕಾಮಾ'

ಎಂಬ ಹಿರಿಯ ವಾಕ್ಯವೂ ಸ್ಮರಣೆಗೆ ಬಂದಿತ್ತು; ಒಂದಿಲ್ಲ—ಖಂಡಿತ

ವಾಗಿ ಹೇಳಲಾರೆ. ತಟ್ಟನೆ ನಿಂತುಬಿಟ್ಟು, "ತಂತಿಗೆ ಎರಡಾಣೆ ಕಡಿಮೆ, ಕೊಡುವಿರಾ?" ಎಂದು ನಮಸ್ಕಾರ ತಿಳಿಸಿ ಕೇಳಿಬಿಟ್ಟೆನು. ಕ್ರೈಸ್ತ ಶ್ರೀಮಂತರು ನನ್ನ ಮೊಗವನ್ನು ಕಂಡು ನಕ್ಕು, ತಮ್ಮ ಮಿತ್ರರೊಡನೆ ಮಾತಾಡುತ್ತ ಇದ್ದವರೆ, ತುಂಬಿದ ತಮ್ಮ ಚೀಲದಿಂದ, ತುಂಬಿದ ತಮ್ಮ ಕೈಯಿಂದ, ತುಂಬಿದ ತಮ್ಮ ಮನಸ್ಸಿನಿಂದ—ತುಂಬಿದ, ತುಂಬಲಿರುವ ನನಗೆ ಕೊಟ್ಟುಬಿಟ್ಟರು. ನಾನು ಮತ್ತೆ ಅವರಿಗೇನೆಂದು ಹೇಳಿದೆನೆಂದು ಮರೆತಿದ್ದೇನೆ. ನೆಟ್ಟಗೆ ತಂತೀಖಾನೆಗೆ ನಡೆದು ತಂತಿ ಬಿಟ್ಟು ಮನೆಗೆ ಮರಳಿದೆನು.

ಶ್ರೀಮಂತರ ಎರಡಾಣೆ ಮರುದಿನಕ್ಕೆ ನನಗೆ ಭಾರವಾಗತೊಡಗಿತು. ಭೂಭಾರ ಹೆಚ್ಚಿದಾಗ ಮಹಾ ಶೇಷನು ತಲೆಯಲ್ಲಾಡಿಸುವಂತೆ, ನನ್ನ ಮನಸ್ಸು ಕಂಪಿಸಿತು. ಚಿಕ್ಕ ಮೊಬಲಗು, ದೊಡ್ಡವರ ಮನಸ್ಸು: ಯಾವ ಅರ್ಥವನ್ನೂ ಮಾಡಬಹುದಿತ್ತು. ಅಲ್ಪಸ್ವಲ್ಪ ಪರಿಚಯವಿದ್ದವರೊಡನೆ ಬೇಡಿ ಲಬ್ಧಕಾಮನಾಗಿದ್ದೆ; ತುಂಬ ಪ್ರಯೋಜನ ಪಡೆದಿದ್ದೆ. ಅವರ ಮನಸ್ಸು ದೊಡ್ಡ ಮನಸ್ಸು; ಅವರು ಕೊಟ್ಟ ಹಣ ಘನತೆಯ ಹಣ. ಮರು ದಿನವೆ ಆ ಎರಡಾಣೆಯನ್ನು ಕೃತಜ್ಞತಾಬುದ್ಧಿಯಿಂದ, ನಮಸ್ಕಾರ ಪೂರ್ವಕವಾಗಿ ಹಿಂದಕ್ಕೆ ಕೊಡಲು ಇಚ್ಛಿಸಿ ಇಡಿಯ ಪೇಟೆಯನ್ನು ಸುತ್ತಾಡಿದೆನು, ಬಸ್ಸುಗಳಲ್ಲಿ ಓಡಾಡಿದೆನು, ಹೊಟೇಲುಗಳಲ್ಲಿ ಆಯಾಸವನ್ನು ಪರಿಹರಿಸಿದೆನು. ನಾಲ್ಕು ಮಾರ್ಗಗಳ ಸಂಗಮದಲ್ಲಿ ಸುಮ್ಮನೆ ಶೂನ್ಯಕ್ಕಿಂತ ಶೂನ್ಯನಾಗಿ ನಿಂತು ತಲೆಯ ಸುತ್ತು ನಿಂತು ಬಂದ ಮುತ್ತಿನ ಬೆವರನ್ನು ಮಾರ್ಗದ ಮೇಲೆ ಚಿಮುಕಿಸಿದೆನು. ಸಂಜೆಯಾಗುತ್ತಿರಲು, ಶಾಲೆಯ ಮಕ್ಕಳು, ಕ್ಲೈವರು ಡೂಪ್ಲೆಗಳು, ನಾನಾ ಫಡ್ನೀಸರು ಲಕ್ಷ್ಮೀ ಬಾಯಿಗಳು, ನೆಹರುಗಳು ಪಟೇಲರು, ನೆಲ್ಸನರು ಹಿಟ್ಲರರು—ಎಲ್ಲವರೂ ಪರಂಧಾಮವೆಂದು ಗೀತಾದಿ ಮಹಾಗ್ರಂಥಗಳಲ್ಲಿ ಸೂಚಿಸಲ್ಪಡುವ ಮನೆಯನ್ನು ಹೊಗುತ್ತಿರಲು, ಕ್ರೈಸ್ತ ಶ್ರೀಮಂತರೊಡನೆ ಮುಂಚಿನ ದಿನ ಮಾತಾಡಿ ನಿಂತ ಗೃಹಸ್ಥರು ಹಠಾತ್ತಾಗಿ ಪರಂಧಾಮದಿಂದ ಹಿಂತಿರುಗಿ ಬಂದು ಒಂದು ಗಡಂಗಿನ (ಹೆಂಡದಂಗಡಿ) ಬಳಿ ಸೇರಿದವರು ಕಾಣಸಿಕ್ಕಿದರು. ವಿಚಾರಿಸಿದೆನು ಅವರೊಡನೆ. ಆ ಕ್ರೈಸ್ತ ಶ್ರೀಮಂತರು ಅಂದಿನ ದಿವಸವೆ ಬರ್ಮಾದೇಶಕ್ಕೆ ಏನೋ ಕಾರಣದಿಂದ ತೆರಳಿದ್ದರೆಂದೂ ನಾನು ಅದಕ್ಕಾಗಿ ವ್ಯಥೆ ಪಡಬೇಕಾಗಿಲ್ಲವೆಂದೂ ನಕ್ಕು ನುಡಿದರು, ಎರಡಾಣೆಯನ್ನು ಮತ್ತೆ ಅಂಚೆಯಲ್ಲಿ

ಚೀಟುಗಳ ರೂಪವಾಗಿ ಕಳಿಸಿದರೆ, ಅವಮಾನವಾಗಬಹುದು; ಕಳುಹಿಸದಿದ್ದರೆ, ಮನಸ್ಸಿನ ಒಂದು ತರದ ಸನ್ನಿಪಾತ ಚಿವುಟಲ್ಪಡದೆ ಅಲ್ಲಿಯೆ ಬೆಳೆಯುತ್ತಿರಬಹುದು ಮುಂದಕ್ಕೆ ಅದು ಮನಸ್ಸಿನ ಕೆಳಹಂತದಿಂದ ಅನಿರೀಕ್ಷಿತವಾಗಿ ವಿಷಮಸಂದರ್ಭವಾಗಿ ಹೊಂಚುಹಾಕಿ ಮೇಲಿನ ಹಂತಕ್ಕೆ ಬಂದು ಮಾನಸಿಕ ಜೀವನಕ್ಕೊಂದು ಕುಗ್ಗು ತರಬಹುದು. ನನಗೆ ನಾಲ್ಕು ದಿನಗಳ ತನಕ ಮನಃಸ್ವಾಸ್ಥ್ಯವು ತಪ್ಪಿತು. ಅಂದರೆ ಲೋಕವಲ್ಲಿ ಸ್ಥಿತಿಗತಿಗಳು, ಸಂದರ್ಭಸನ್ನಿವೇಶಗಳು,ವಿದ್ಯಮಾನ ವೇದ್ಯಮಾನಗಳು ನಮ್ಮ ಇಚ್ಛೆಗೆ, ನಮ್ಮ ಅಪ್ಪಣೆಗೆ ಮಾರ್ಪಡುವುದಿಲ್ಲ; ನಮ್ಮ ನಿರೀಕ್ಷೆಗೆ ಕೂಡಿಕೊಂಡು ಬರುವುದಿಲ್ಲ. ನಾವು ಎಣಿಸಿದಂತೆ ಲೋಕ ಇರಬೇಕಾದರೆ, ಲೋಕ ಇರುವಂತೆ ನಾವೇಕೆ ಎಣಿಸಬಾರದು? ಎಷ್ಟೋ ಸಂಗತಿಗಳಲ್ಲಿ ಹಿಂದುಮುಂದು ತೂಗಬೇಕಾಗಿದೆ, ಉಪ್ಪುಖಾರಗಳನ್ನು ಜೀರ್ಣಿಸಿಕೊಳ್ಳಬೇಕಾಗಿದೆ.

ಹರಿಕಥೆಯಲ್ಲಿ ಉಪಕಥೆಯನ್ನಕೇಡಿರಿ; ನನ್ನೊಬ್ಬ ಗೆಳೆಯನು. ಶ್ರೀಮಂತರ ಸತ್ಪುತ್ರನು ತನ್ನ ಒಡನಾಡಿಗಳಲ್ಲಿ, ಓರಗೆಯವರಲ್ಲಿ ತಿರುಗಾಡುವವನು ಗಡ್ಡ ಬೆಳೆಸಲು ಆರಂಭಮಾಡಿದನು; ದಿನಸಕ್ಕೆ ಎರಡು ಸಲ ತನ್ನ ಗದ್ದವನ್ನು ಮಿದುಗೊಳಿಸುವವನು, ಫಕ್ಕನೆ ಗಡ್ಡ ಬೆಳೆಸಿದರೆ, ಬೇರೆಯವರ ಗಮನಕ್ಕೆ ಅರ್ಹನೋ ಬಲಿಯೋ ಆಗುತ್ತಾನಲ್ಲವೆ? "ಏನು, ಕಿಣ್ಯಾ, ಗಡ್ಡ ಬೆಳೆಯಿಸುತ್ತಿ?" ಎಂದು ಮೆಲ್ಲನೆ ಆತನಿಗೆ ಪ್ರಶ್ನೆ ಕೇಳುವವರು ದೃಢಮನಸ್ಕರಾಗುತ್ತ ಬಂದರು. ಕೇಳಿದ ಕಿಣ್ಯನು ಒಮ್ಮೆ ನಾಣುವಿಗೆ ಉತ್ತರವನ್ನು ಕೊಟ್ಟೇ ಬಿಟ್ಟನುಃ "ನೀನೇಕೆ ಪ್ರತಿ ದಿನ ಗಡ್ಡವನ್ನು ಕೀಳುತ್ತೀ?" ಎಂದು. ಅಂದಿನಿಂದ ಕಿಣ್ಯನಿಗೆ ಪ್ರಶ್ನೆಯೂ ಇಲ್ಲ; ಅವನ ಗಡ್ಡ ಬೆಳೆಯುತ್ತ ಬಂದರೂ ಗಮನಾರ್ಹವಾಗಲಿಲ್ಲ.

ಇದಾಗಿ ಕೆಲ ದಿನಗಳಲ್ಲಿ ನಾನು ಈ ಸಂಗತಿಯೆಲ್ಲವನ್ನು ಮರೆತು ಬಿಟ್ಟೆನು. ದೊಡ್ಡವರ ಮನಸ್ಸನ್ನು ಮರೆಯಲಾಗದು; ಆದರೆ ದೊಡ್ಡವರನ್ನು ಮರೆಯಬಹುದಾಗಿದೆ. ಯಾವ ಶ್ರೀಮಂತನೊಡನೆ ಆ ಎರಡಾಣೆ ದಾನವನ್ನು ನಾನು ಪಡೆದೆ, ಯಾವ ಮನುಷ್ಯನಿಗಾಗಿ ನಾನು ಆ ತಂತಿಯನ್ನು ಕೊಡಲು ಹೋಗಿದ್ದೆ, ಆ ತಂತೀಖಾನೆ ಮಂಗಳೂರಿನ ಯಾವ ಭಾಗದಲ್ಲಿದೆ, ಅಂದಿನ ರಾತ್ರೆ ಗಾಢಾಂಧಕಾರದ ಕಗ್ಗತ್ತಲೆಯದೆ, ಧಾರಾವರ್ಷದ ಗುಡುಗು ಮಿಂಚಿನ ಕಾದಾಟದ ದಿನವೆ, ಅಲ್ಲವೆ? ಆ ತಂತೀಖಾ

ನೆಯ ಗುಮಾಸ್ತನು ಯಾರು,—ಹರಿಜನನೆ ಹೊಲೆಯನೆ— ಎರಡೂ ಅಲ್ಲದೆ ಹಿಂದುಸ್ಥಾನಿಯೆ—ಆತನೇನು ಮತ್ತೆ ನನ್ನ ಗೆಳೆಯರ ವೃಂದಕ್ಕೆ ಸೇರಿದನೆ— ಇವೇ ಮೊದಲಾದ ಸಂಗತಿಗಳು—ದೊಡ್ಡ ದೊಡ್ಡ ಸಂಗತಿಗಳು ನನ್ನ ಮನಸ್ಸಿನ ಪಟದಿಂದ ಮಾಯವಾಗಿವೆ. ಆದರೆ ಇವುಗಳಿಗೆಲ್ಲ ಸಮತೂಕವಾಗಿ, ಪ್ರಾಯಶಃ ಅತೀತವಾಗಿ ಆ ಎರಡಾಣೆಯ ಅಲ್ಪನಾದ ಸಂಗತಿ ಅಚ್ಚಳಿಯದೆ ಸ್ಮೃತಿ ಪಟದಲ್ಲಿ ಉಳಿದುಕೊಂಡು ಬಂದಿದೆ.

ಸಮಯವು ತಿರುಗುತ್ತಾ ಇರುವಾಗ, ಲೋಕವೂ ತಿರುಗುತ್ತ ಇರಬೇಕು. ಬಡವರು ಶ್ರೀಮಂತರಾಗುತ್ತಾರೆ, ಶ್ರೀಮಂತರು ಯೋಗಸ್ಥರಾಗುತ್ತಾರೆ. ನಾನು ಹಂಪನಕಟ್ಟೆಯ ಐದು ಮಾರ್ಗಗಳು ಸೇರುವಲ್ಲಿ ನಿಂತುಕೊಂಡಿದ್ದೆ. ಕೆಲವರು ಮೋಟರು ಕಾರುಗಳಲ್ಲಿ ಹೋಗುತಿದ್ದರು ಇನ್ನು ಕೆಲವರು ಗಾಡಿಯಲ್ಲಿ ಸವಾರಿಸುತಿದ್ದರು. ಮತ್ತೆ ಕೆಲವರು ತಾವಾಗಿಯೆ ನಡೆಯುತಿದ್ದರು. ಎಲ್ಲವರ ಅವಸ್ಥೆ ಒಂದೇ ಆದರೆ, ನಾನು ಹಂಪನಕಟ್ಟೆಯ ಆರು ಮಾರ್ಗಗಳು ಸೇರುವಲ್ಲಿ ಏನೂ ಕೆಲಸವಿಲ್ಲದಿದ್ದರೂ ಯಾರನ್ನೊ ಏನನ್ನೊ ನಿರೀಕ್ಷಿಸುತ್ತಿರುವವನಂತೆ ಮಾಡಿಕೊಂಡು ನಿಲ್ಲುತ್ತಿರಲಿಲ್ಲ. ನಾನು ಕೂಡ ಯಾವುದಾದರೂ ಒಂದು ವಾಹನದಲ್ಲಿ ಇದ್ದು, ಬೇಕಾದ ಕಡೆಗೆ ಸರ್ರನೆ ಒಯ್ಯಿಸಿಕೊಂಡು, ಆಗಬೇಕಾದ ಕೆಲಸ ಭುರ್ರನೆ ಮುಗಿಸಿ, ದಿವಸದ ಹೆಚ್ಚಿನ ಹೊತ್ತು ಮನೆಯಲ್ಲಿಯೋ ಕ್ಲಬ್ಬಿನಲ್ಲಿಯೋ ಹಾಯಾಗಿ ಇರುತ್ತಿದ್ದೆನು. ಆದರೆ, ಎಲ್ಲವರ ಅವಸ್ಥೆ ನನಗೆ ಬೇಕಾಗಿಲ್ಲ. ಎಲ್ಲವರಿಗಿಲ್ಲದ ಅವಸ್ಥೆ ನನ್ನದಾದರೆ, ನಾನೆಲ್ಲವರನ್ನು ತೂಗಿ ತಿಳಿಯುವ ಸಾಧ್ಯತೆಯಿದೆ. ಆದ್ದರಿಂದಲೆ, ಬೇರೆಯವರು ನನ್ನನ್ನು ತೂಗುತ್ತಾರೆ, ನಾನು ಬೇರೆಯವರನ್ನು ತೂಗುತ್ತೇನೆ. ತೂಗ ಬಾರದು ಎನ್ನುವವರು ಇರುತ್ತಾರಲ್ಲ, ಅವರು ನಿಜವಾಗಿಯೂ ಮಹಾತ್ಮರು. ಏಕೆಂದರೆ, ಕೈತೂಕದಲ್ಲಿ ತೂಗುವಾಗ ತಕ್ಕಡಿಯ ಅಡ್ಡ ಕೋಲಿಗೆ ಬೆರಳಿನ ಭಾರವಿಡುವುದೂ ಉಂಟಲ್ಲವೆ? ಅದಕ್ಕಾಗಿಯೆ, ಸನ್ನಿವೇಶಗಳನ್ನು ತೂಗುತ್ತೇನೆ ಅಲ್ಲದೆ, ವ್ಯಕ್ತಿಗಳನ್ನು ನಾನಿಷ್ಟು ಕಾಲವೂ ತೂಗಿಲ್ಲವೆಂದರೆ, ನನ್ನ ಮಾತನ್ನು ತೂಗಿಕೊಳ್ಳಿ, ನನ್ನನ್ನು ತೂಗ ಬೇಡಿರಿ.

ಇಷ್ಟೆಲ್ಲಾ ಏಕೆ ಹೇಳುತದ್ದೇನೆ? ಹಂಪನ ಕಟ್ಟೆಯ ಆರು ಮಾರ್ಗಗಳು ಕೂಡುವಲ್ಲಿ ನಿಂತಾಗ ಒಬ್ಬನು ಹಿಂದಿನಿಂದ ನಿಂತು ಮಾತನಾಡಿಸಿದನು.

ಕೊಡೆಯನ್ನು ಬಿಡಿಸಿಕೊಂಡು, ಸಾಧಾರಣ ಶುಭ್ರವಾದ ಉಡುಪನ್ನು ತೊಟ್ಟು ಕೊಂಡು, "ತಾನೊಬ್ಬನು" ಎಂಬ ಬಿರುದನ್ನು ಇಟ್ಟುಕೊಂಡು, ಒಬ್ಬನು ನನ್ನನ್ನು ಹಿಂದಿನಿಂದ ನಿಂತು ಮಾತನಾಡಿಸಿದನು.

ನಾನು ಕವಿ ಸಂಘದ ಕೋದಂಡನು ಹೌದೆಂದೆನು. "ಹಾಗೇಕೆ ಕೇಳಿದೆ?" ಎಂಬುದು ನನ್ನ ಮರು ಪ್ರಶ್ನೆ. "ಏನಿಲ್ಲ, ಈ ಹೊತ್ತು ಇಡಿಯ ಪಟ್ಟಣಕ್ಕೆ ಬ್ರಹ್ಮಾಂಡ ರಜೆ, ನನಗೆ ಪಡುಬಿದ್ರಿಗೆ ಹೋಗಲಿದೆ. ಆರಾಣೆ ಕೊಟ್ಟರೆ, ನಾಳೆಯೆ ಕವಿ ಸಂಘದಲ್ಲಿ ನಿಮಗೆ ತಂದೊಪ್ಪಿಸುವೆನು."

"ಅದು ಸರಿಯೆ, ನನ್ನೊಡನೆ ಚಿಲ್ಲರೆಯಿಲ್ಲ. ಇರುವುದೊಂದೇ ರೂಪಾಯಿ ನಾಣ್ಯ. ಅದೂ ಅಗತ್ಯ ನನಗೆ"

"ನಾನಿಂದು ಪಡುಬಿದ್ರಿಗೆ ಹೋಗದಿದ್ದರೆ, ಹೆಂಡತಿ ಮಕ್ಕಳ ಅನ್ನ ಹೋದಂತೆ." ಹೇಳುವವನ ಮುಖ ವಿವರ್ಣವಾಯಿತು; ಕೇಳುವವನ ಹೃದಯ ತುಂಬಿ ಬಂತು.

"ಚಿಲ್ಲರೆ ಮಾಡಿಸಿ, ಹೋಗಿ ಬಂದುಬಿಡು."

ನಾಣ್ಯವು ನನ್ನ ಕೈಯಿಂದ ಕೈವರ್ತಿಸಿತು. ಬಸ್ಸು-ಸ್ಟೇಶನಿನಲ್ಲಿ ಅದು ಚಿಲ್ಲರೆಯಾಯಿತು. ಎಂಟೆಂಟಾಣೆಯ ಎರಡು ಪಾವಲಿಗಳು ಆತನಿಗೆ ಬಂದುವು. ನಾನಾಗ, "ಟಿಕೇಟನ್ನು ಇಲ್ಲಿಯೆ ಕೊಂಡುಕೊಳ್ಳು, ಹತ್ತಾಣೆ ಕೊಟ್ಟು ಬಿಡು," ಎಂದು ಸೂಚಿಸಿದೆನು.

"ಟಿಕೇಟು ಮತ್ತೆ ಇನ್ನೊಂದು ಸ್ಟೇಶನಿನಲ್ಲಿ ಕೊಳ್ಳುವೆನು. ನನ್ನೊಡನೆ ಎಂಟಾಣೆಯೆ ಇರಲಿ," ಎಂದು ನನಗೊಂದು ಪಾವಲಿ ಕೊಟ್ಟು, ಇನ್ನೊಂದು ಪಾವಲಿಯನ್ನು ಕಿಸೆಯಲ್ಲಿ ಇಳಿಸಿ, ಆಸಾಮಿ ಸರಕ್ಕನೆ ನಡೆದು ಬಿಟ್ಟನು.

ಕೋದಂಡನಿಗೆ ಸಂಶಯವಾಗುವುದೆಂದರೆ, ಅದೊಂದು ಮನಸ್ಸಾಕ್ಷಿಯೆ. "ಹಾಗಾದರೆ, ಇನ್ನೊಂದು ಕಡೆ ಎಂಟಾಣೆ ಪಾವಲಿ ಮುರಿಯಿಸಿ, ಎರಡಾಣೆ ಹಿಂದಕ್ಕೆ ಕೊಡು," ಎಂದು ಬಿಗಿದ ಮನಸ್ಸಿನಿಂದ ಮಿಂಚಿದೆನು.

ಆಸಾಮಿ ನನ್ನ ಮಾತಿಗೆ ಕಿವಿಗೊಡನು. ನಾನು ಅಲ್ಲಿಯೆ ಇದ್ದ ಬೀಡಾ ಬೀಡಿ ಅಂಗಡಿಯಲ್ಲಿ ಒಂದು ಚಿಕ್ಕಾಸಿನ ಬೀಡಕ್ಕಾಗಿ ಎಂಟಾಣೆಯನ್ನು ಮುರಿಯಿಸಿ, ಕ್ಷಣಾರ್ಧದಲ್ಲಿ ಎಂಬಂತೆ ಕೊಡೆ ಬಿಡಿಸಿ, ಗಾಂಧಿ ಶಾಲನ್ನು ಹೊದ್ದುಕೊಂಡು, ಸಾಧಾರಣ ಶುಭ್ರವಾದ ಉಡುಪನ್ನು ಇಟ್ಟುಕೊಂಡು, ಸರ ಸರನೆ ಮುಂದುವರಿಯುವ ಆ ಆಸಾಮಿಯ ಬೆಂಬತ್ತಿದೆನು.

"ಆರಾಣೆ ಇಲ್ಲಿದೆ. ಎಂಟಾಣೆ ನನಗಿರಲಿ," ಎಂದು ನೆಗೆಯುವ ಮನಸ್ಸಿನಿಂದ ಅವನನ್ನು ಆವರಿಸಿದೆನು. ಪಾಪದ ಆ ಮನುಷ್ಯನು ನನ್ನ ಮುಖವನ್ನೆ ದಿಟ್ಟಿಸಿ, ಎಂಟಾಣೆ ಪಾವಲಿ ಕೊಟ್ಟು, ಆರಾಣೆ ಸ್ವೀಕರಿಸಿ, ಕೊಡೆ ಹಿಡಿದು, ಗಾಂಧಿ ಶಾಲನ್ನು ಹೊದ್ದುಕೊಂಡು, ಸಾಧಾರಣ ಶುಭ್ರವಾದ ಉಡುಪನ್ನು ತೊಟ್ಟು ಮುನ್ನಡೆದು ಎಲ್ಲಿಗೋ ಮಾಯವಾದನು.

ಇದೊಂದು ದೊಡ್ಡ ಸಂಗತಿಯಲ್ಲ. ಇದಕ್ಕಿಂತ ಸ್ವಾರಸ್ಯವಾಗಿ, ಚಮತ್ಕಾರವಾಗಿ ನನಗೆ ಮೋಸವಾದುದಿದೆ. ಮೋಟರು ಬಂಡಿಯಿಂದ ಇಳಿಯುವಾಗ ಶ್ರೀಮಂತರೊಬ್ಬರು ನನ್ನೊಡನೆ ಮಾತನಾಡಿ ನಿಂತರು. ಹತ್ತು ನಿಮಿಷ ಮಾತಾಡಿ ನಿಂತಿರಬಹುದು; ಬಸ್ಸು ಅಲ್ಲಿಂದ ಹೋಗಿ ಬಿಟ್ಟಿದೆ. ಫಕ್ಕನೆ ಒಬ್ಬ ಸಣ್ಣ ಪೋರ ಮುಂದಕ್ಕೆ ಬಂದನು.

"ಸ್ವಾಮಿಾ, ನನ್ನ ಕೂಲಿ ಕೊಟ್ಟುಬಿಡಿ."

"ಯಾವ ಕೂಲಿ?"

"ಈ ಸಾಮಾನು ಕೆಳಗಿಳಿಸಿದ ಕೂಲಿ."

ನನ್ನ ಸಾಮಾನು ನಾನು ಕೆಳತಂದರೆ, ಈ ಪೋರನಿಗೆ ನಾನು ಕೂಲಿ ಹಣ ಕೊಡಬೇಕೆ? ಮಾತಾಡಲು ನಿಂತ ಶ್ರೀಮಂತರೆದುರು ಸುಮ್ಮನೆ ನಾಲ್ಕು ಮಾತು ವ್ಯಯ ಮಾಡಬೇಕಾಯಿತಲ್ಲ?

"ಸರಿ, ಇಕೋ ಒಂದಾಣೆ," ಎಂದು ಆ ಪೋರನನ್ನು ಕಳುಹಿಸಿದಾಯಿತು. ಲೋಕದಲ್ಲಿ ಸಂಪತ್ತು ಹೆಚ್ಚಿದಂತೆ ಮೋಸ ಹೆಚ್ಚುತ್ತಿದೆ. ಸಂಪ್ರದಾಯ ಬೆಳೆದಂತೆ, ಹೆದರಿಕೆ ಬೆಳೆಯುತ್ತಲ್ಲವೆ?

ದೂರದಿಂದ ಅದೇ ವ್ಯಕ್ತಿ! ಕೊಡೆ ಬಿಡಿಸಿ, ಗಾಂಧಿ ಶಾಲನ್ನು ಹೊದ್ದುಕೊಂಡು, ಸಾಧಾರಣ ಶುಭ್ರವಾದ ಉಡುಪನ್ನು ತೊಟ್ಟು, ದೂರದಿಂದ ಅದೇ ವ್ಯಕ್ತಿ! ವ್ಯಕ್ತಿಗಳು ಹಲವಿವೆ; ಒಂದು ವ್ಯಕ್ತಿಗೂ ಇನ್ನೊಂದು ವ್ಯಕ್ತಿಗೂ ಯಾವ ಅಂತರವೂ ಇಲ್ಲ. ನಾನು ಏನೋ ಆಲೋಚಿಸುತಿದ್ದೆ. ಕಾಳಿದಾಸನ ಶಕುಂತಳೆ ಶಚೀ ತೀರ್ಥವನ್ನು ವಂದಿಸುವಾಗ ಅವಳ ಬೆರಳಿನ ಉಂಗುರವು ತಪ್ಪಿದಾಗ ಕಾಳಿದಾಸನಿಗೆ ಸಂತೋಷವಾಯಿತೆ? ಮನಸ್ಸಿನಲ್ಲೆ ಹಿಡಿಯಲಾಗದ ದುಃಖ ತುಂಬಿತೆ? ಎಂಬ ವಿಚಾರವಾಹಿನಿಯಲ್ಲಿ ತೇಲಾಡುತಿದ್ದೆನು. "ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್ ಪರ್ಯುತ್ಸುಕೀ ಭವತಿ ಯತ್ಸುಖಿತೋಽಪಿ ಜಂತುಃ" ಈ ವೃತ್ತವನ್ನು

ನನ್ನೊಡನೆಯೆ ಹೇಳಿಕೊಂಡು, ಐದು ದಿನಗಳ ಹಿಂದೆ ಯಾರೋ ಒಬ್ಬಳನ್ನು ಕಂಡಾಗ ನನಗೇಕೆ ಮನೋಭೇದವುಂಟಾಯಿತು? ತಿಂಗಳ ಹಿಂದೆ. ಸಾಧುವೊಬ್ಬನು ಬಂದು "ಭವಾನ್ ಭಿಕ್ಷಾಂ ದದಾತು" ಎಂದು ಮಧುರವಾಗಿಯೆ ಹೇಳುವಾಗ ಅವನಲ್ಲಿ ಸಂಶಯವುತ್ಪನ್ನವಾದರೂ ಮನ ಕರಗಿ ನಾನೇಕೆ ನನ್ನ ಶಾಲನ್ನೇ ಕೊಟ್ಟು ಬಿಟ್ಟೆನು?—ಎಂದು ಮೊದಲಾಗಿ ವಿಚಾರ ಪಂಥಾನವಲ್ಲಿ ನಡೆಯುತಿದ್ದಾಗ—ಆ ವ್ಯಕ್ತಿ ಕೊಡೆ ಬಿಡಿಸಿ-ಗಾಂಧಿ ಶಾಲನ್ನು ಹೊದ್ದುಕೊಂಡು, ಸಾಧಾರಣ ಶುಭ್ರವಾದ ಉಡುಪನ್ನು ತೊಟ್ಟು ಬರುವ ವ್ಯಕ್ತಿ—ಬರುತ್ತಾ ಇದ್ದ ವ್ಯಕ್ತಿ ತನ್ನ ಕೊಡೆಯನ್ನು, ಬಿಡಿಸಿದ ಕೊಡೆಯನ್ನು ತನ್ನ ಮುಖಕ್ಕೆ ಅಡ್ಡ ಇಟ್ಟು ನನ್ನನ್ನು ಹಾದು ಹೋಯಿತು.

ಧಾರವಾಡದಿಂದ ಗೆಳೆಯರೊಬ್ಬರು ಬಂದಿದ್ದರು. ಅವರೊಡನೆ ಪೇಟೆಯನ್ನು ಸುತ್ತಾಡಲಿಕ್ಕೆ ಹೊರಟೆನು. ಮಂಗಳೂರಿನ ಹಂಚಿನ ಕಾರ್ಖಾನೆ, ಕಾಫಿಯ ಕಾರ್ಖಾನೆ, ಗೇರು ಬೀಜದ ಕಾರ್ಖಾನೆ—ಎಲ್ಲ ಕಾರ್ಖಾನೆ ನೋಡಿ, ಎಲ್ಲ ಗುಡ್ಡೆ ಸಂದರ್ಶಿಸಿ, ಎಲ್ಲ ಶಾಲೆಗಳನ್ನು ಮುತ್ತಿ, ಎಲ್ಲ ಹೊಟೇಲು ಹೊಕ್ಕು, ಎಲ್ಲ ಮಾರ್ಗ ತಿರುಗಾಡಿಸಿ, ಎಲ್ಲ ಓಣಿ ನಡೆಯಿಸಿ, ಕಡೆಗೆ ರಥ ಬೀದಿಯಿಂದ ಬರುವಾಗ ಬೇರೆ ಬೇರೆ ವಿಚಾರ ಮಾಡುತಿದ್ದೆವು. ಅಂಬಿಕಾತನಯದತ್ತನ ಸ್ಥಿತಿಗತಿ, ಆತನ ಹುಟ್ಟೂರು,—ವಿನಾಯಕನ ಮರ್ಜಿ—ಅವನು ಆಲೋಚನೆ ಮಾಡುವ ಭಾಷೆ ಇಂಗ್ಲಿಷ, ಒಂದು ತರದ ಕನ್ನಡವೆ? ಪುಟ್ಟಪ್ಪನು ನಿಜವಾಗಿಯೂ ಈಗಿರುವ ಊರು ಬೆಂಗಳೂರೆ, ಮೈಸೂರೆ, ಬೊಮ್ಮನ ಹಳ್ಳಿಯೆ, ಬೇರೆಯೇ?-ರತ್ನನ ಖಂಡಿತವಾದ ಜಾತಿ ಧರ್ಮ—ಕುಡುಕನೆ, ಬೌದ್ಧನೆ, ಜೈನನೆ, ಅಯ್ಯಂಗಾರನೆ?—ಶ್ರೀರಂಗ ಬರೆದ ಸಂಸ್ಕೃತ ಸಾಹಿತ್ಯ ಚರಿತ್ರೆ—ವೀಸಿ ಕನ್ನಡದ ಮೇಷ್ಟ್ರೆ, ಅರ್ಥ ಶಾಸ್ತ್ರದ ಓಜನೆ?—ಈ ಮೊದಲಾದ ಸಂಗತಿಗಳನ್ನು ಮಾತನಾಡುತ್ತ ಆಯಾಸ ಹೊಂದಿ, ಬಸವಳಿದು ಬಾಯಾರಿ, ಹಸಿವಾಂತು ಕೋಮಲ ವಿಲಾಸದ ಮೆಟ್ಟಲುಗಳನ್ನು ಹತ್ತಿ, ಒಳ ಹೊಕ್ಕು, ಕುರ್ಚಿಯಲ್ಲಿ ಕೂತು ಒಂದು ಸಲಕ್ಕೆ ನಾಲ್ಕು ಕಡೆಗೆ ನೋಡುವಾಗ—ತಿರಗೊಮ್ಮೆ ಅದೇ ವ್ಯಕ್ತಿ ಗಾಂಧಿಯ ಶಾಲನ್ನು ಹೊದ್ದುಕೊಂಡು, ಸಾಧಾರಣ ಶುಭ್ರವಾದ ಉಡುಪನ್ನು ತೊಟ್ಟುಕೊಂಡು—ಬಿಳಿ ಗಾಂಧಿಟೊಪ್ಪಿಯನ್ನು ಇಟ್ಟುಕೊಂಡು ಕಾಫಿ ಕುಡಿಯುವ ವ್ಯಕ್ತಿ, ಬಿಡಿಸಿದ ಕೊಡೆ ಮಡಚಿ ಮೇಜಿನ ಮೇಲಿಟ್ಟು ಕಾಫಿ ಕುಡಿಯುವ ವ್ಯಕ್ತಿ!

ವ್ಯಕ್ತಿ ಗಾಂಧಿಯ ಶಾಲನ್ನು ಮುಖಕ್ಕೆಲ್ಲ ಮುಚ್ಚಿಕೊಂಡಿತು, ಮುಖಕ್ಕೆ ತಾಗಿದ ನೀರನ್ನು ಒರಸುವಂತೆ!

ಧಾರವಾಡದ ಗೆಳೆಯರು ಮತ್ತೆ ನಮ್ಮೂರಿನ ಇತಿಹಾಸ ಸಂಶೋಧಕರು ಮಂಜೇಶ್ವರರ ಊರಿನ ವ್ಯುತ್ಪತ್ತಿ, ಅವರು ಬರೆವಣಿಗೆಗೆ ಉಪಯೋಗಿಸುತ್ತಿರುವುದು ಹಕ್ಕಿಯ ಗರಿಯೆ, ಕಾರಂಜಿಯ ಪೆನ್ನೆ, ಶಾಯಿಯ ಲೇಖಣಿಯೇ? ನಾಡೋಜ ಪಂಪದ ಇಂಪಿನ ಮುಳಿಯರ ಸೊಂಪಿನ ಮನೆಗೊಯ್ಯುವ ಪೆಂಪಿನ ಮಾರ್ಗದ ಮಾರ್ಗಣೆ, ಪಶುಪತಿಯ ತ್ರಿಶೂಲದ ಲೋಹ ಬೆಳ್ಳಿಯೆ ಕಬ್ಬಿಣವೆ? ಕವಿ ಸಂಘದ ಪುಂಡರೀಕನ ಕೆಚ್ಚೆದೆಯ ಕಾವ್ಯಗಳ ಪುಸ್ತಕದ ಬೆಲೆ ಆರಾಣೆಯೆ, ಎಂಟಾಣೆ? ಮೊದಲಾದ ಮಾತೆತ್ತಿ ಕೂತೆವು. ಕಾಫಿ ಕುಡಿದೆವು. ಆಗ ಮಾತ್ರ ಕೊಡೆ ಬಿಡಿಸಿ, ಈಗ ಮುಚ್ಚಿ, ಗಾಂಧಿಯ ಶಾಲನ್ನು ಹೊದ್ದುಕೊಂಡು ಸಾಧಾರಣ ಶುಭ್ರವಾದ ಉಡುಪನ್ನು ತೊಟ್ಟುಕೊಂಡು, ಬಿಳಿಯ ಗಾಂಧಿ ಟೊಪ್ಪಿಯನ್ನು ಇಟ್ಟುಕೊಂಡು ಕೂತ ವ್ಯಕ್ತಿ ಮಾತ್ರ ಕಾಣೆಯಾಗಿತ್ತು.

ಹಂಪನ ಕಟ್ಟೆಯೆಂದರೆ, ಏನು ಬೇಕು–ಅದು ಸಿಗುವ ಹೆದ್ದಾರಿ. ನಗದಿಯಿದ್ದವರಿಗೆ ನಗದಿಯಿಲ್ಲದವರಿಗೆ, ಶ್ರೀಮಂತರಿಗೆ ಬಡವರಿಗೆ, ಪಂಡಿತರಿಗೆ ಫಟಿಂಗರಿಗೆ, ಕವಿಜನಗಳಿಗೆ ಕುರಿಜನಗಳಿಗೆ, ಭಟ್ಟರಾದವರಿಗೆ ಭ್ರಷ್ಟರಾದವರಿಗೆ–ಎಲ್ಲವರಿಗೆ ಎಲ್ಲ ಸಿಕ್ಕುವ ದಾರಿಯದು. ನಿಮಗೆ ಮೋಸ ಮಾಡಿದವರು ನೀವು ಮೋಸ ಮಾಡಿದವರು, ನಿಮಗೆ ಬೇಕಾದವರು ನಿಮಗೆ ಬೇಡವಾದವರು, ಸತ್ತೂ ಬದುಕಿದವರು ಬದುಕಿಯೂ ಸತ್ತವರು, ಪಾಕಿಸ್ಥಾನದವರು ಹಿಂದುಸ್ಥಾನದವರು, ಬೀಡಿಯೆಳೆಯುವವರು ಬೀಡಾವುಗುಳವವರು, ತಲೆಯನ್ನು ಕಂಕುಳಲ್ಲಿ ಇಟ್ಟು ನಡೆಯುವವರು, ತಲೆಯನ್ನು ಭುಜಗಳ ಮೇಲೆ ಹೊತ್ತು ನಡೆಯುವವರು, ಎಲ್ಲವರು ಅಲ್ಲಿ ಸಿಗುವರು. ನಿಮ್ಮ ಕದ್ದು ಹೋದ ಕೊಡೆ, ಅಲ್ಲಿ ತಿರುಗಿ ಫೇರಿಯವರೊಡನೆ ಎಂಟಾಣೆಗೆ ಸಿಕ್ಕುತ್ತದೆ. ನಿಮ್ಮ ಕಾಲಿನ ಮೆಟ್ಟಿಗೆ ಕಾಲುಕೊಟ್ಟು ನಡಿದು ಬಿಟ್ಟ ಆ ಟೊಣಪನೂ ನಿಮಗೆ ದೂರದಿಂದಲೆ ಕಾಣುವನು. ಅಂತಹ ಹಂಪನ ಕಟ್ಟೆಗೆ ಬಂದು ಆ ಕಡೆ ಈ ಕಡೆಯೆನ್ನುತ್ತ ನಾನು ಹೋಗುವಾಗ ಅದೇ ವ್ಯಕ್ತಿ, ತಿರಿಗೊಮ್ಮೆ ಅದೇ ವ್ಯಕ್ತಿ—ಗಾಂಧಿಯ ಶಾಲನ್ನು ಹೊದ್ದುಕೊಂಡು, ಸಾಧಾರಣ ಶುಭ್ರವಾದ ಉಡುಪನ್ನು ಇಟ್ಟುಕೊಂಡು ಬರುವ ವ್ಯಕ್ತಿ—ಬಿಡಿಸಿದ ಕೊಡೆಯನ್ನು ಮುಖಕ್ಕೆ ಅಡ್ಡವಿಟ್ಟು ಮುಂದಕ್ಕೆ ನಡೆಯಿತು. ಹತ್ತು

ಹಜ್ಜೆ ಮುನ್ನಡೆದು ಹೋದಾಗ ತಿರಿಗೊಮ್ಮೆ ಅದೇ ವ್ಯಕ್ತಿ ಕಣ್ಣೆದುರಿನಲ್ಲಿ ಬಂದಿತು. ಗತಿ ಮುರಿದು ಸರಕ್ಕನೆ ಹಿಂವಕ್ಕೆ ನೋಡಿದೆನು. ನೋಡುವಾಗ—ಆ ವ್ಯಕ್ತಿ ಮಾಯವಾಗಿತ್ತು.

ಹಂಪನ ಕಟ್ಟೆಯಿಂದ ಜೇಡಿ ಗುಡ್ಡೆಗೆ ಇಳಿದೆ, ಜೇಡಿ ಗುಡ್ಡೆಯಿಂದ ಕದ್ರಿಗೆ ಬಂದೆನು. ಕದ್ರಿಯಿಂದ ಗೋರಿಯ ಮಾರ್ಗವನ್ನು ಹಿಡಿದೆನು. ಇಲ್ಲ; ಅಲ್ಲೆಲ್ಲಿಯೂ ಇಲ್ಲ. ಮುಂದೆ ಸ್ಮಶಾನದ ಮಾರ್ಗ. ಇಷ್ಟಾಗುವಾಗಲೂ ಅನೇಕ ಕಾಫಿ ಹೊಟೇಲುಗಳನ್ನು ದಾಟಿ ಹೋಗಿದ್ದೆ. ಆಯಾಸವಾಗಿದ್ದಿಲ್ಲ. ಆದ್ದರಿಂದ ಒಳ ಹೋಗಲಾರದೆ ಮುನ್ನಡೆಯುತಿದ್ದೆ. ಮಾರ್ಗದಲ್ಲಿ ಯಾವ ಯಾವ ಸದ್ಗೃಹಸ್ಥನನ್ನು ಕಂಡೆ, ಯಾವ ಯಾವ ಮಹಿಳೆಯನ್ನು ದಾಟಿ ಹೋದೆ,ಯಾವ ಯಾವ ಕಾರು ಗಾಡಿ ಸಾಯ್ಕಲು ದ್ವಾವಿಂಶರಿಗೆ ಮಾರ್ಗ ಬಿಟ್ಟುಹೋದೆ—ಅದೊಂದೂ ತಿಳಿಯಲಾರೆ; ಮುನ್ನಡೆದೇ ಹೋದೆ, ಮುನ್ನಡೆದೇ ಹೋದೆ. ಎಲ್ಲಿಗೆ, ಏನು ಕತೆ ತಿಳಿಯಲಾರದೆ ಹೋಯಿತು.

ಮುನ್ನಡೆದ ನಾನು ಅಕಸ್ಮಾತ್ ಹಿಂದೆ ನೋಡಿದೆನು. ಆಗ ತಾನೆ ದಾಟಿ ಹೋದುದು, ತಿರಿಗೊಮ್ಮೆ ಅದೇ ವ್ಯಕ್ತಿ! ಗಾಂಧಿಯ ಶಾಲನ್ನು ಹೊದ್ದುಕೊಂಡು, ಬಿಡಿಸಿದ ಕೊಡೆಯನ್ನು ಮುಖಕ್ಕೆ ಅಡ್ಡವಿಡದೆ ಮುನ್ನಡೆಯುವ ವ್ಯಕ್ತಿ!

ಆ ವ್ಯಕ್ತಿ ತಿರಿಗೊಮ್ಮೆ ನನ್ನನ್ನು ದಾಟಿ ಬಿಟ್ಟಿತು!

ನಾನು ಅಲ್ಲಿಂದ ಸಟಸಟನೆ ನಡೆದೆನು. ಹಿಂದನ್ನು ಮುಂದನ್ನು ಮರೆತು ನಾನೇನು ನಾನಾರು ಎಂಬುದೆಲ್ಲವನ್ನು ಗಂಟು ಕಟ್ಟಿ, ಮುಂಬರುವ ಸ್ನೇಹಿತರು, ಮುಂಬರುವ ಗಾಳಿ ಪಟಗಳು, ವಿಲಾಸದ ನೋಟಗಳು—ಎಲ್ಲವನ್ನು ಯುಗ ಯುಗಗಳ ಹಾರುವ ಹಕ್ಕಿಯಂತೆ ಹಾರಿದೆನು, ಜನ ಜನಗಳ ಹಾಯುವ ಕೋಣದಂತೆ ಮೀರಿದೆನು—ಆಗ ತಿರಿಗೊಮ್ಮೆ ಅದೇ ವ್ಯಕ್ತಿ! ತಿರಿಗೊಮ್ಮೆ ಅದೇ ವ್ಯಕ್ತಿ!! ಕೊಡೆಯನ್ನು ಬಿಡಿಸಿ, ಗಾಂಧಿಯ ಶಾಲನ್ನು ಹೊದ್ದು, ಗಾಂಧಿಯ ಟೊಪ್ಪಿಯನ್ನಿಟ್ಟು,ಸಾಧಾರಣ ಶುಭ್ರವಾದ ಉಡುಪನ್ನು ತೊಟ್ಟು ಮುನ್ನಡೆಯುವ ವ್ಯಕ್ತಿ! "ಹೇ ವ್ಯಕ್ತಿ! ಗಾಂಧಿ ಕೊಡೆಯನ್ನೇಕೆ ಹಿಡಿಯಲಾರೆ?" ಎಂದು ಮನಸ್ಸಿನಲ್ಲೆ ಅಂದು ಕೊಂಡೆ.

ಸಾಯುಂಕಾಲವಾಗಿತ್ತು; ಬೇಸಗೆಯ ದಿನವಾಗಿತ್ತು. ನಾನು ಬಿಡಿಸಿದ ಕೊಡೆಯಲ್ಲಿ ನನ್ನ ಮುಖವನ್ನು ಅಡಗಿಸಿ, ಮುಂಬರಿದು ಬರುವ ವ್ಯಕ್ತಿ

ಯನ್ನು ಸವಿಸಾಪವಾಗಿಯೆ ಹಾಡು ಹೋದೆನು, ತೆಳ್ಳಗಿನ ಹತ್ತಿಯಂತೆ ಬೆಳ್ಳಗಿನ ನೊರೆಯಂತೆ, ಮೆಲ್ಲಗಿನ ತೊರೆಯಂತೆ!

ಅರ್ಧಕ್ಕೆ ಅರ್ಧದಿಂದ ಗುಣಿಸಿ ಅರ್ಧದಿಂದ ಭಾಗಿಸಿದರೆ ಬರುವುದುತ್ತರ ಅರ್ಧವೆಂದನಲ್ಲ ಪುಂಡರೀಕ, ಅದು ಹೇಗಾಗುತ್ತದೆ? ಎಂದು ಕಿಸೆಯೊಳಗಿನ ಕಾಗದದ ತುಂಡಿನಲ್ಲಿ ಪೆನ್ಸಿಲಿನಿಂದ $\frac{1}{2}\times\frac{1}{2}\div\frac{1}{2}=\frac{1}{2}=\frac{1}{2}\times\frac{1}{2}\times\frac{2}{1}=\frac{1}{2}$ ಎಂದು ಏನೋ ಬಿಡಿಸಿದ ಕೊಡೆಯ ತೆರೆಯ ಹಿಂದಕ್ಕೆ ಗೀಚುತ್ತ ಹೋದೆನು.

ಗೀಚುತ್ತ ಹೋದೆನು, ಎಂದು ಹೇಳಿದೆನೆ? ಅದೇ ಹೊತ್ತಿಗೆ ಹಾಡು ಹೋಯಿತು ಅದೇ ವ್ಯಕ್ತಿ—ಬಿಡಿಸಿದ ಕೊಡೆಯನ್ನು ಓರೆಯಾಗಿ ತನ್ನ ಮುಖಕ್ಕೆ ಅಡ್ಡ ಹಿಡಿಯದೇ—ಗಾಂಧಿಯ ಶಾಲನ್ನು ಮೈ ಮೇಲೆ ತೊಟ್ಟೇ—ಸಾಧಾರಣ ಶುಭ್ರವಾದ ಉಡುಪನ್ನು ಉಟ್ಟೇ-ಪಣಂಬೂರಿಗೆ ಹೆಂಡತಿ ಮಕ್ಕಳನ್ನು ಕಾಣ ಹೋಗುವ ಸಂಸಾರಿಯೇ— ಬೆಣ್ಣೆ ಮುದ್ದೆಯನ್ನು ಕದಿಯುವ ಯಶೋದೆಯ ಮಗನೆ!

ಆದರೆ, ಏನಾಟವಿದು? ಯಶೋದೆಯ ಕಂದ, ಮೂಲೋಕದ ಗಂಡ, ಮುಚುಕುಂದ ಗೋವಿಂದ! || ಅವ್ಯಕ್ತಾ, ಸಂದಿಗ್ಧಾ, ಸಂಸಾರಕೆ ಬಂದಾ ಗೋವಿಂದ! || ಉದರ ನಿಮಿತ್ತಂ ಬಹು ಕೃತ ವೇಷಾ, ಗೋವಿಂದಾ ಗೋವಿಂದಾ! || ಕೋದಂಡನಿಗಾರಾಣೆಯ ದಂಡಾಕೊಟ್ಟಾ ಸಂತೋಷಾ, ಗೋವಿಂದಾ ಗೋವಿಂದಾ, ಗೋವಿಂದಾ!

## ೯. ದಸರೆ

ಅಪರಿಚಿತ ವ್ಯಾಪಾರೀ ಗೃಹಸ್ಥರೊಬ್ಬರು ಬರೆದ ಪತ್ರಕ್ಕೆ ತಕ್ಕ ಪ್ರತ್ಯುತ್ತರವನ್ನು ಬರೆದಾದ ಅನಂತರ, '**ಮರೆತ ಮಾತಿನಲ್ಲಿ**' ನೀವು "ಪಟ್ಟಣದ ಋಷಿಗಳು" ಎಂಬ ಪುಸ್ತಕವನ್ನು ಬರೆದ ಕೃಷ್ಣ ಅಯ್ಯಂಗಾರರೆ? ಬೇರೆಯವರೆ? ಎಂಬುದಾಗಿ ಕೂಡ ಪ್ರಶ್ನೆಯೊಂದನ್ನು ಕೇಳಿದ್ದೆನು. ಆ ಮಹಾನುಭಾವರು ನನ್ನ ಪ್ರಶ್ನೆಗೆ ಮತ್ತೆ ಉತ್ತರವನ್ನು ಬರೆಯಲಿಲ್ಲ. ನನ್ನ ಕುತೂಹಲವನ್ನೇಕೆ ಅವರು ಮುದುಡಿಸಿ ಬಿಟ್ಟರೋ ನಾನು ಕಾಣೆ. ನನ್ನ ಉದ್ಧಟತನಕ್ಕೆ ಅವರದು ಮೌನದ ಮದ್ದಿರಬಹುದು.

ಹಾಗೆಯೇ ಒಂದೆರಡು ವರ್ಷಗಳ ಹಿಂದೆ, ನಮ್ಮ ಹಳ್ಳಿಯ ರಾಮನವಮಿ ಉತ್ಸವಕ್ಕೆ ನಾನು ಕಾರ್ಯದರ್ಶಿಯೋ, ಸೂತ್ರಧಾರನೋ ಆಗಿ

ದ್ದಾಗ ಪರವೂರಿನಿಂದ ಒಬ್ಬಿಬ್ಬರು ಭಕ್ತರನ್ನು ಕರೆದಿದ್ದೆನು. ಮೊದಲನೇ ದಿವಸಕ್ಕೆ ಬಂದಿಳಿದವರನ್ನು ಮೋಟಾರು ನಿಲ್ದಾಣದಲ್ಲಿಯೇ ಸಂಧಿಸಿ, "ನೀವು ಮನೆಯಲ್ಲಿ ಉಳಕೊಳ್ಳುವಿರೋ ಹೋಟೇಲಿನಲ್ಲಿ ಆಗಬಹುದೆನ್ನುವಿರೋ?" ಎಂದು ಕೇಳಿದೊಡನೆ, "ನನಗೆ ಮನೆಯೂ ಆಗದು, ಹೋಟೇಲೂ ಸಲ್ಲದು," ಎಂದು ಥಟ್ಟನೆ ಹೇಳಿಕೊಂಡು ಮರುಕ್ಷಣದ ಬಂಡಿ ಹತ್ತಿ ತಮ್ಮ ಊರಿಗೆ ಅವರು ನಡೆದು ಬಿಟ್ಟಿದ್ದರು.

ಪ್ರಶ್ನೆಗಳಿಗೆ ನೆಟ್ಟಗೆ ಉತ್ತರಗಳನ್ನು ಬರೆದರೆ, ಅವುಗಳು ಸಮರ್ಪಕವಾದುವುಗಳೆಂದು ನಮ್ಮ ಉಪಾಧ್ಯಾಯರು ನಮ್ಮನ್ನು ಆಗಾಗ ಎಚ್ಚರಿಸುವುದಿತ್ತು. ಆದರೆ ಅವರ ಎಚ್ಚರಿಕೆಯ ಮಾತು ಮಾತ್ರ ನಮ್ಮ ದಪ್ಪಗಾದ ಮಿದುಳಿನಲ್ಲಿ ಪ್ರತಿಫಲಿಸುತಿದ್ದಿಲ್ಲ. ಆದುದರಿಂದಲೇ ಅವರು ಒಮ್ಮೊಮ್ಮೆ ನಾವು ಅಲ್ಲದ ಸಲ್ಲದ ಉತ್ತರಗಳನ್ನು ಕೊಟ್ಟರೆ ನಮ್ಮ ತಲೆಯೊಳಗಿದ್ದ ಹುಲ್ಲನ್ನು ಹುಡುಕಿಕೊಂಡು ಎಮ್ಮೆ ದನಗಳು ಬಂದಿವೆಯೆಂದು ನಮಗೆ ಅಪಹಾಸ್ಯ ಮಾಡುವುದಿತ್ತು. ಅದೆಂತೂ ಇರಲಿ; ನನ್ನ ವಿದ್ಯಾರ್ಥಿದಶೆಯಲ್ಲಿ ಸಮರ್ಪಕವಾದ ಉತ್ತರಗಳನ್ನು ನಾನು ಕೊಡದೆ ಇದ್ದರೂ, ನಾನೀಗ ನೆಟ್ಟಗೆ ಆಗಿರುವ ಪ್ರಶ್ನೆಗಳನ್ನು ಕೇಳುವುದರಲ್ಲಿ ಜಾಣನಾಗಿರುವೆನೆಂದು ಹೇಳಬಲ್ಲೆ.

ಹೊಸ ರೀತಿಯ ಪ್ರಶ್ನ ಪತ್ರಿಕೆಗಳ ಪದ್ಧತಿಯು ಬರುವುದಕ್ಕಿಂತ ಮುಂಚಿನಿಂದಲೂ ಕನ್ನಡದ ಓಜರು ಚುಟುಕು ಪ್ರಶ್ನೆಗಳನ್ನು ಕೇಳುವವರಾಗಿದ್ದರು. ಅವರ ಒಂದು ಪ್ರಶ್ನ ಪತ್ರಿಕೆಗೆ ೫೦ ಮಾರ್ಕುಗಳಿದ್ದರೆ ೬೦ ಪ್ರಶ್ನೆಗಳಿದ್ದು, ಅಕ್ಷರ ಮಾಲೆಯ ಎಲ್ಲ ಅಕ್ಷರಗಳಿಂದ ಆ ಪ್ರಶ್ನೆಗಳನ್ನು ಅಂಕಿತಗೊಳಿಸಿ, ತಮ್ಮ ವಿದ್ಯಾರ್ಥಿಗಳಿಗೆ ಪ್ರತಿಪರೀಕ್ಷೆಯ ಸಮಯದಲ್ಲಿ ಅಕ್ಷರಾಭ್ಯಾಸದ ಪಾಠವನ್ನೂ ಕಲಿಸಿಕೊಡುತಿದ್ದರು. ಅವರು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಬರೆಯಲು ನಮ್ಮಲ್ಲಿ ಕೆಲವರಿಗೇನೇ ಸಾಧ್ಯವಾಗುತ್ತಿತ್ತು. ಉದಾಹರಣೆಯಾಗಿ, ೧೯೨೫ನೇ ಇಸವಿಯಲ್ಲಿ ದಶಂಬರಿನ ನಮ್ಮ ಪರೀಕ್ಷೆಗೆ ಈಯೊಂದು ಪ್ರಶ್ನೆಯಿತ್ತು! "ಯಾರು ಯಾವ ವರ್ಷದಲ್ಲಿ ಏನಾದರು?" ಈ ಪ್ರಶ್ನೆಗೆ ನಮ್ಮೂರಿನ ಸಂಕಪ್ಪ ಪೂಜಾರಿ (ಆತನೀಗ ದಫೇದಾರ) ೪ನೇ ಪಾಠದ ೩ನೇ ಪಂಕ್ತಿಯಲ್ಲಿದ್ದ ವಾಕ್ಯವೊಂದಾಗಿದ್ದ ಕೆಲವು ಶಬ್ದಗಳನ್ನು ಬರೆದನಂತೆ; ಆವನಿಗೆ ತುಂಬಾ ಮಾರ್ಕುಗಳು ಬಂದುವಂತೆ. ಸಂಕಪ್ಪ ಪೂಜಾರಿಯು ಓದುವುದರಲ್ಲಿ ಗಟ್ಟಿಗನೆಂದು ಅಂದಿನಿಂದ ಆವನನ್ನು ನಾವು ಗಟ್ಟಿ ಸಂಕಪ್ಪನೆಂದು ಕರೆಯುವ ವಾಡಿಕೆಯಿತ್ತು.

ತರಗತಿಯ ಪರೀಕ್ಷೆಯಲ್ಲಿ ನನಗೆ ನಾಕಷ್ಟು ಮಾರ್ಕುಗಳು ಸಿಕ್ಕು ತಿದ್ದಿಲ್ಲವಾದರೂ ಸರಕಾರಿ ಪರೀಕ್ಷೆಯಲ್ಲಿ ನಾನು ಉತ್ತಮ ತರಗತಿಯಲ್ಲಿ ಪಾಸಾಗುತಿದ್ದೆನು. ಸರಕಾರೀ ಪರೀಕ್ಷೆಗಳಲ್ಲಿ ಪ್ರಾಯಶಃ ಏನು ಬರೆದರೂ ದಕ್ಕುತ್ತದೆ. ಒಂದು ಸಲ ಪ್ರಶ್ನೆಯನ್ನು ಕೇಳಿದ ಪರೀಕ್ಷಕನಿಗೇನೇ ನಾನು ಉತ್ತರ ರೂಪವಾಗಿ ಇನ್ನೊಂದು ಪ್ರಶ್ನೆಯನ್ನು ಕೇಳಿದೆನು. ಆ ಸಲವೇನೋ ಪರೀಕ್ಷಕರ ಉತ್ತರ ರೂಪವಾಗಿ ಬಹುಶಃ ನಾನು ತೇರ್ಗಡೆಯನ್ನು ಹೊಂದ ಲಿಲ್ಲ. ಎರಡನೆಯ ಬಾರಿಗೆ ನಾನು ಪರೀಕ್ಷೆಗೆ ಕೂತಾಗ ಬಹಳ ಜಾಗ್ರತೆ ಯಿಂದ ಓದಿ ಸಿದ್ಧನಾಗಿದ್ದೆನು.

ಸಂದರ್ಭವನ್ನು ಕೊಟ್ಟು ವಿವರಿಸುವುದಕ್ಕಾಗಿ ವಾಙ್ಮಯ ಭಾಗವನ್ನು ಕೊಡುವ ಪದ್ಧತಿಯು ಪರೀಕ್ಷೆಗಳಲ್ಲಿ ಅನಾದಿಯಷ್ಟೆ? ಒಮ್ಮೆ ಹಾಗೆ ಕೊಡ ಲ್ಪಟ್ಟ ಎರಡು ಚರಣಗಳ ಸಂದರ್ಭವೂ ಅರ್ಥವೂ ನನಗೆ ಚೆನ್ನಾಗಿ ತಿಳಿ ಯದೆ ಹೋಗಿ, ಕಡೆಗೆ ನಾನು ಪರೀಕ್ಷಕರ ವಾಙ್ಮಯಾಭಿರುಚಿಯನ್ನೂ ಸಾಹಿತ್ಯ ಪಾಂಡಿತ್ಯವನ್ನೂ ಉಪಾಯವಾಗಿ ಪರೀಕ್ಷಿಸಿ ಬಿಟ್ಟೆನು. ಆ ಉಪಾ ಯವನ್ನು ತಿಳಿಸುವುದಕ್ಕಿಂತ ನಾನು ಕೊಟ್ಟ ವಿವರಣೆಯನ್ನು ಇಲ್ಲಿ ಉದ್ಧೃ ತಗೊಳಿಸುವುದು ಉತ್ತಮವೆಂದು ಎಣಿಸುತ್ತೇನೆ.

''ಈ ಎರಡು ಚರಣಗಳನ್ನು ಶ್ರೀರಾಮಚಂದ್ರನು ಉದ್ಗರಿಸಿದ್ದೇ ರಾವಣನು ಆರಬಟಿಸಿದ್ದೇ ನನಗೆ ಚೆನ್ನಾಗಿ ಜ್ಞಾಪಕವಿಲ್ಲ. ಯಾರೇಂದಿದ್ದರೂ ಅವರ ಅರ್ಥ ಉಭಯ ಸಾಮಾನ್ಯವಾಗಿದೆ. ಪಂಡಿತರು ಈ ಚರಣಗಳಿಗೆ ಅರ್ಥ ವಿವರಿಸುವಾಗ 'ಮನಸಿಜಂ ಅಸೂಯೆಯಿಂ ಗೈದಂ' ಎಂಬುದಕ್ಕೆ ಕಾಮಚಕ್ರೇಶ್ವರನು ಅಸೂಯೆ ಪಟ್ಟನು ಎಂದು ಅರ್ಥ ಬರೆಯಿಸಿ ಕೊಟ್ಟಂತೆ ನೆನಪಿದೆ. ಆದರೆ ಅದು ಶುದ್ಧ ತಪ್ಪು. ಏಕೆಂದರೆ ಮನಸಿಜನೆಂದರೆ ಚಂದ್ರ ನೆಂಬರ್ಥ. ಋಗ್ವೇದದಲ್ಲಿ 'ಚಂದ್ರಮಾ ಮನಸೋ ಜಾತಃ' ಎಂದಿದೆ. ಅಂದರೆ ಚಂದ್ರನು ಮನಸ್ಸಿನಲ್ಲಿ ಹುಟ್ಟಿದನು. ಆದುದರಿಂದ ಶಕುಂತಳೆಯು ದುಷ್ಯಂತನನ್ನು ಕಂಡಾಗ, ಮದನನು ಅಸೂಯೆಗೊಂಡನು ಎಂದು ಹೇಳು ವುದಕ್ಕಿಂತ, ಚಂದ್ರನು ಪಲಾಯನಗೈದನು ಎಂದು ವಿವರಿಸಿದರೆ ಕಾವ್ಯವು ಹೃದಯಂಗಮವೂ ಸುಶ್ರಾವ್ಯವೂ ಮಧು ಮಧುರವೂ ಆಗುತ್ತದೆ.

''ಅಲಂಕಾರದ ವಿಚಾರದಲ್ಲಿಯೂ ನಮ್ಮ ಪಂಡಿತರು ತಪ್ಪಿ ಬಿದ್ದಿರುವ ರೆಂದು ಊಹಿಸುತ್ತೇನೆ. ಅವರಿದರಲ್ಲಿ ಹೀನೋಪಮೆಯೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಹೀನೋಪಮೆಗೆ ಬೆಲೆಯೆಲ್ಲಿಂದ ಬರಬೇಕು? ಬೆಲೆ

ಯಿಲ್ಲದಿದ್ದರೆ ಅಲಂಕಾರವಾಗುತ್ತದೆಯೇ? ಬೆಲೆಯಿದ್ದ ಅಲಂಕಾರಗಳಿಗೆ ಬೇಂಕಿಗೆ ಹೋದರೂ ಸೇಕಡಾ ೫೦ರಷ್ಟು ಸಾಲ ಬರುವುದಿಲ್ಲ. ಅಂತಿಪ್ಪ ಅನಂತರ ಸಾಲದ (ಸಾಲೆಯ) ಉಪಾಧ್ಯಾಯರಿಗೆ ಪ್ರತಿಯೊಬ್ಬ ವಿದ್ಯಾರ್ಥಿಯೂ ಈ ಪದ್ಯದಲ್ಲಿ ಎರಡು ಅಲಂಕಾರಗಳಿವೆ, ಮೂರು ಅಲಂಕಾರಗಳಿವೆಯೆಂದು ತೋರಿಸಿ ಅವನ್ನು ಒಪ್ಪಿಸಿ ಕೊಟ್ಟರೆ ಏನು ಪ್ರಯೋಜನವಿದೆ.? ಆದ್ದರಿಂದ ಈ ಪದ್ಯದಲ್ಲಿ ಅಲಂಕಾರವಿಲ್ಲ; ಅದು ಇದ್ದರೆ ಲುಪ್ತಗುಪ್ತೋಪಮೆಯೆಂದು ನಾನು ಭಾವಿಸುತ್ತೇನೆ."

ಈ ಪ್ರಶ್ನೆಗಿದ್ದ ಮಾರ್ಕುಗಳು ಒಂದುವರೆ. ಪರೀಕ್ಷಕರು ಅರ್ಧವನ್ನು ತಮಗಾಗಿ ಇಟ್ಟುಕೊಂಡು ಉಳಿದೊಂದನ್ನು ನನಗೆ ಅರ್ಪಿಸಿರಬಹುದು. ಅಲಂಕಾರವೆಂದರೇನು, ಮನಜನೆಂದರಾರು ಎಂದು ತಿಳಿಯದವರು ಪ್ರಾಯಶಃ ಪರೀಕ್ಷಕರಾಗಿದ್ದಿರಬೇಕು. ಏಕೆಂದರೆ ಎರಡನೆಯ ಪರೀಕ್ಷಾ ಪತ್ರದಲ್ಲಿ ಸಿನೇಮದ ಮೇಲೆ ಬರೆದ ಪ್ರಬಂಧದಲ್ಲಿ ಶರ್ಲಿ ಟೆಂಪಲ್, ಕಣ್ಣನ್ ಬಾಲಾ ಮೊದಲಾದ ನಟಿಗಳು ಗಂಡಸರೆಂದು ಭ್ರಮಿಸಿ ಅವರಿಗಾಗಿ ಪುಲ್ಲಿಂಗದ ಸರ್ವನಾಮಗಳನ್ನು ಉಪಯೋಗಿಸಿದ್ದೆ. ಸಿನೇಮವನ್ನು ನೋಡದವರು ಪ್ರಬಂಧ ಪರೀಕ್ಷಕರಾಗಿ, ಅಲಂಕಾರ ತಿಳಿಯದವರು ಪದ್ಯ ಪರೀಕ್ಷಕರಾಗಿ, ನಾನಂತೂ ಒಳ್ಳೆಯ ತರಗತಿಯಲ್ಲಿಯೆ ತೇರ್ಗಡೆಹೊಂದಿದೆನು.

ಗಂಡಸರನ್ನು ಹೆಂಗಸರನ್ನಾಗಿ ಸಂಬೋಧಿಸಿದವರಲ್ಲಿ ನಾನೊಬ್ಬನೇ ಎಂದು ಎಣಿಸದಿರಿ. ಕನ್ನಡದಲ್ಲಿ ಪ್ರಸಿದ್ಧ ಪತ್ರಿಕೋದ್ಯಮಿಗಳೊಬ್ಬರು ತಮ್ಮ ಗೆಳೆಯರೊಬ್ಬರನ್ನು ಫಕ್ಕನೆ ಮಾರ್ಗದಲ್ಲಿ ನಿಲ್ಲಿಸಿ "ವರ್ಜಿಲ್ ಎಂದರೆ ಗಂಡೆ, ಹೆಣ್ಣೆ?" ಎಂದು ಕೇಳಿದರಂತೆ. ಪ್ರಶ್ನಿಸಲ್ಪಟ್ಟವರು ಸ್ವಲ್ಪ ಅವಸರದಲ್ಲಿದ್ದುದರಿಂದ ಹೆಚ್ಚು ಗಮನ ಕೊಡದೆ "ವರ್ಜಿನ್ ಎಂದರೆ ಹೆಣ್ಣು" ಎಂದು ನಡೆದು ಬಿಟ್ಟರು. ಹಿಂದೀ ಪತ್ರಿಕೆಯಿಂದ ಭಾಷಾಂತರ ಮಾಡುವುದರಲ್ಲಿ ತಜ್ಞರಾದ ನಮ್ಮ ಪತ್ರಿಕೋದ್ಯಮಿಗಳು ಲೆಟಿನ್ ಭಾಷೆಯ ಪ್ರಸಿದ್ಧ ಕವಿಯಾದ ಆ ವರ್ಜಿಲನನ್ನು ಹೆಣ್ಣಾಗಿ ಭಾವಿಸಿ, ಎರಡು ಪುಟದ ಉಪನ್ಯಾಸದ ೬೦ ಕಡೆಗಳಲ್ಲಿ 'ಅವಳು' ಎಂಬ ಸರ್ವನಾಮವನ್ನು ಉಪಯೋಗಿಸಿದರಂತೆ.

ದಸರೆಯನ್ನು ಕುರಿತು ಬರೆಯತೊಡಗಿದವನು ಪರೀಕ್ಷರ ಗುಟ್ಟನ್ನು ರಟ್ಟು ಮಾಡಿ, ಪತ್ರಿಕೋದ್ಯಮಿಗಳ ವಿಡಂಬನೆಗಿಳಿದು, ಬರೆವಣಿಗೆಯಲ್ಲಿ ಕಸರತ್ತಿನ ಆಟವನ್ನು ಮಾಡುತಿದ್ದೇನೆಂದು ಮೂಗನ್ನು ಮುರಿದುಕೊಳ್ಳಬೇಡಿರಿ. ಒಂದನ್ನು ಕುರಿತು ಆಲೋಚಿಸುತಿದ್ದಾಗ, ಇನ್ನೊಂದನ್ನು ಸೂಚಿಸುವಂತ

ಹುದು ನನಗೆ ಸ್ವಾಭಾವಿಕವಾಗಿದೆ. ಚಿತ್ರ ಲೇಖನದ ಪಾಠಗಳನ್ನು ಕಲಿಯು ತಿದ್ದಾಗಲೂ ಅದೇ ಊನದಿಂದ ತೊಳಲುತ್ತಿದ್ದೆನು. ಕಾಗೆಯ ಚಿತ್ರವನ್ನು ಬರೆಯಹೋದವನಿಗೆ ತನ್ನಿಂದ ತಾನಾಗಿ ಗುಬ್ಬಚ್ಚಿಯ ಚಿತ್ರವು ಪತ್ರದಲ್ಲಿ ಪ್ರತ್ಯಕ್ಷವಾಗುತಿತ್ತು. ಈ ವಿಚಾರವನ್ನು ಉಪಾಧ್ಯಾಯರಿಗೆ ತಿಳಿಸಿದೊಡನೆ ಆ ಮಹಾತ್ಮರು, "ಗುಬ್ಬಿ ಬರೆಯಲು ತೊಡಗು, ಕಾಗೆ ಬಂದೀತು," ಎಂದು ಅಪ್ಪಣೆ ಕೊಡಲು, ಗುಬ್ಬಿಯನ್ನು ಮನಸ್ಸಿನಲ್ಲಿಟ್ಟು ಲಿಖಿಸುವಾಗ ಯಾವುದೋ ಒಂದು ಹಕ್ಕಿಯ ಆಕೃತಿ ಉಂಟಾಗಿ ನನ್ನ ಒಡನಾಡಿಗಳೆಲ್ಲರೂ ಖೋ— ಎಂದು ನಕ್ಕು, ನಕಲಿ ಮಾಡಿದುದನ್ನು ನಾನಿನ್ನೂ ಮರೆತಿಲ್ಲ.

ಅಂತೂ ಇದು ನನಗೆ ಜನ್ಮಸಿದ್ಧವಾದ ತೊಡಕಾಗಿದೆ. ಅಂತಹ ತೊಡಕಿನವರು ನನ್ನ ಅನುಭವದಲ್ಲಿ ತುಂಬ ಜನರಿರುವರು. ಬಹಳ ಸಣ್ಣ ತರಗತಿಗಳಲ್ಲಿ ಓದುತಿದ್ದಾಗ ನಾವು ವಿದ್ಯಾರ್ಥಿಗಳೆಲ್ಲರೂ ಬಹಳ ತಂಟೆಯನ್ನು ನಡೆಯಿಸುತಿದ್ದೆವು. ವಿದ್ಯಾರ್ಥಿಗಳು ತಂಟೆ ನಡೆಯಿಸಲು ಕಾರಣಗಳು ಬೇರೆ ಬೇರೆ ಇರಬಹುದೆಂದು ಮನಃಶಾಸ್ತ್ರವನ್ನು ಬಲ್ಲವರು ವಿವರಿಸಿದ್ದಾರೆ. ಆದರೆ ನಾವೇಕೆ ಪಾಠಕ್ಕೆ ಮನಸ್ಸು ಕೊಡದೆ, ಓರಗೆಯವರೊಡನೆ ಪಿಸುಗುಟ್ಟುತ್ತ, ಕಾಗದಗಳ ವಿಮಾನಗಳನ್ನು ಮಾಡಿ ಕೋಣೆಯಲ್ಲಿಯೇ ಅವನ್ನು ಹಾರಿಸುತಿದ್ದೆವೂ ಎಂಬುದು ನನಗಿನ್ನೂ ತಿಳಿದಿಲ್ಲ. ನಾವು ಹೇಗೆ ಉಪಾಧ್ಯಾಯರಿಗೆ ಉಪದ್ರವ ಕ್ಕಿಟ್ಟಾಗ ಆ ಉಪಾಧ್ಯಾಯರು ನಮ್ಮ ಅಪರಾಧಗಳಿಗಾಗಿ ನಮ್ಮನ್ನು ಶಿಕ್ಷಿಸಿಯೇ ಶಿಕ್ಷಿಸುತಿದ್ದರು. ಆದರೆ ಒಂದೊಂದು ಸಲ ನಾವು ಉಪಾಯದಿಂದ ತಪ್ಪಿಸಿಕೊಳ್ಳುತಿದ್ದೆವು. ಅವರು ಬೆತ್ತವನ್ನೆತ್ತಿ ಹೊಡೆಯುವ ವರೆಗೆ ಅಂಗೈಯನ್ನು ತೋರಿಸಿ, ಬೆತ್ತವು ಕೈಗೆ ತಾಗುವಷ್ಟರಲ್ಲಿ ಕೈಯನ್ನು ಹಿಂದೆಕ್ಕೆಳೆಯುತಿದ್ದೆವು. ಆದುದರಿಂದ ಉಪಾಧ್ಯಾಯರೂ ಕೂಡ ಬುದ್ಧಿ ಕಲಿತು, ಒಬ್ಬ ಹುಡುಗನನ್ನು ನಿಲ್ಲಿಸಿ, ಅವನನ್ನು ಹೆದರಿಸಿ, ಅವನ ಸಮೀಪವೇ ಇದ್ದ ಶಿಕ್ಷೆಯ ನಿರೀಕ್ಷಣೆಯಿಲ್ಲದ ಹುಡುಗನಿಗೆ ಬೆನ್ನಿನಲ್ಲಿ ಹೊಡೆದುಬಿಡುತಿದ್ದರು. ಆಗ ಈ ಹುಡುಗನಿಗೆ ಪೆಟ್ಟುಗಳಿಂದ ತಪ್ಪಿಸಿಕೊಳ್ಳಲಾಗುತಿದ್ದಿಲ್ಲ. ಹೀಗೆ ಹಲವು ಕಾಲಗಳ ವರೆಗೆ ಒಬ್ಬನನ್ನು ನೋಡಿ ಇನ್ನೊಬ್ಬನನ್ನು ಶಿಕ್ಷಿಸುವುದೇ ನಮ್ಮಲ್ಲಿ ವಾಡಿಕೆಯಾಗಿ ಬಂದಿತ್ತು.

ಅಂತೂ ಇದೊಂದು ಸ್ವಭಾವಸಿದ್ಧವು. ಇಲ್ಲದಿದ್ದರೆ, "ನಾನು ಮಾಡಿದ ವಿಮರ್ಶೆ" ಎಂಬ ಲೇಖನದಲ್ಲಿ ಕೋದಂಡನು ತಾನು ಮಾಡದ ವಿಮರ್ಶೆಯನ್ನೇಕೆ ಮಾಡಿದನು? ವಿಮರ್ಶಾಕಾರರು ಪುಸ್ತಕಗಳನ್ನು ಓದದೆ ಯಾವ ರೀತಿಯಲ್ಲಿ ವಿಮರ್ಶೆಯನ್ನು ಮಾಡುವರು ಎಂಬುದನ್ನು ಸ್ಥೂಲರೂಪವಾಗಿ ಬಣ್ಣಿ

ಸಲು ಇದ್ದ ಕೋದಂಡನು ಆ ವಿಮರ್ಶಾಕಾರರಂತೆಯೇ, "ಸೊಬಗಿನ ಬಳ್ಳಿ" ಯನ್ನು ತೆರೆದು ನೋಡದೆ ಅದನ್ನೇಕೆ ವಿಮರ್ಶಿಸಹೋದನು? ವಿಮರ್ಶಿಸಿಯೂ ಗ್ರಂಥಕರ್ತೃವಿನ ವಿಚಾರದಲ್ಲಿ, ಅವನ ಕಾಲನಿರ್ಣಯಲ್ಲಿ ತಪ್ಪುಭಾವನೆಗಳ ನ್ನೇಕೆ ಮಾಡಿದನು? ಆದರೆ, ಹಾಗೆ ದೊಡ್ಡ ದೊಡ್ಡ ಸಾಹಿತ್ಯಸಂಶೋಧಕರೂ ತಪ್ಪುಗಳನ್ನು ಮಾಡುವುದುಂಟೆಂದು ನಾನು ಸಕಾರಣವಾಗಿ ತೋರಿಸಬಲ್ಲೆನು. ಉದಾಹರಣೆಗಾಗಿ, ರಾ. ಶಿ. ಎಂಬ ಸುಪ್ರಸಿದ್ಧ ಸಾಹಿತ್ಯ ಸಂಶೋಧಕರು, "ಶ್ರೀನಿವಾಸ"ನು ಮುದ್ದಣನ ಕಿರಿಯ ತಮ್ಮನು ಎಂದು ಸಾಧಿಸಲಿಕ್ಕೆ ಹೋದ ವರು, ಹಾಗೆ ಸಾಧಿಸಬೇಕಾದವರು, ಚಿಂತಿಸುತ್ತ ಚಿಂತಿಸುತ್ತ ಕಡೆಗೆ ತಮ್ಮ ಅಭಿಪ್ರಾಯಗಳಿಗೆ ಶಬ್ದರೂಪವನ್ನು ಕೊಡುವಾಗ "ಶ್ರೀನಿವಾಸನು ಬಡವನಿರ ಬೇಕು. ನಾನು ಬಡವನಿದ್ದೇನೆ. ಆದ್ದರಿಂದ ಆತನು ನಾನೇ ಆಗಿರಬೇಕು." ಎಂಬ ಸಿದ್ಧಾಂತಕ್ಕೆ ಬಂದಿಳಿದರಂತೆ. ಮುದ್ದಣನ ಕಿರಿಯ ತಮ್ಮನು ಶ್ರೀ ಮಂತನಾದರೇನು, ಬಡವನಾದರೇನು? ಪಂಡಿತನಾದರೇನು, ಗಾಪಿಲನಾದ ರೇನು? ಆತನು ಮುದ್ದಣನ ಬಳಗಕ್ಕೆ ಸೇರಿದವನು. ಮುದ್ದಣನ ಬಳಗಕ್ಕೆ ಸೇರಿದವರೆಲ್ಲರೂ ಸರಸ್ವತಿಯ ಪುತ್ರರು. ಸರಸ್ವತಿಯ ಪುತ್ರರಾದವರಿಗೆ "ಭಿಕ್ಷಾಂ ದೇಹಿ"ಯ ವ್ರತವಿರಲಿ, "ಭಿಕ್ಷಾಂದದಾಮಿ" ವ್ರತವಿರಲಿ ಎರಡೂ ಒಂದೇ ಎಂದು ಹೇಳಿದಂತಾಗುವುದಿಲ್ಲವೇ?

ತುಟಿ ಮೀರಿದುದು! ತುಟಿಮೀರಿದುದು ಯಾವುದು? ಎಂದು ಒಬ್ಬರು ನನ್ನೊಡನೆ ವಿಚಾರಿಸಿದರು. ಛತ್ರಬಂಧ ಪದ್ಯವನ್ನೂ ಅಲಬಂಧ ಪದ್ಯವನ್ನೂ ಓದಿದ ಆ ರಸಿಕರು ನಗುತ್ತ ಈ ಪ್ರಶ್ನೆಯನ್ನು ನನಗೆ ಕೇಳಿದ್ದರು. ಬಂಧನ ದಿಂದ ಹೊರಬರುವ ಆ ಗೋರಿಲ್ಲದ ಚಿತ್ರಕ್ಕೆ ಬೆರಳಿಟ್ಟು ತೋರಿಸಿ,—"ಇವ ನೆಂದು ಬಂಧವಿಮುಕ್ತನಾದನು?" ಎಂದು ನಾನು ಹಿಂದಕ್ಕೆ ಪ್ರಶ್ನಾರೂಪ ದಲ್ಲಿ ಉತ್ತರವನ್ನು ಕೊಟ್ಟೆ. "ಸುತ್ತಲಿನ ವಾತಾವರಣದ ವಿಚಾರದಲ್ಲಿ ತನ ಗಿದ್ದ ಅಜ್ಞಾನವನ್ನು ಕುರಿತು ಅರಿವು ಬಂದಾಗ", ಎಂದು ಅವರು ಉತ್ತರ ಕೊಟ್ಟರು. "ಆ ವಿಚಾರವು ಮೊದಲು ವ್ಯಕ್ತವಾದುದು ತುಟಿಮೀರಿದಾಗ, ನಗು ಬಂದಾಗ", ಎಂದು ನಾನು ಸೂಚಿಸಿದೆನು. ರಸಿಕರು ನಕ್ಕರು; ಕೋದಂ ಡನೂ ನಕ್ಕನು.

ಯಾವುದೇ ಇರಲಿ, ಕೋದಂಡನು ಸಿನೆಮಾ ನಾಟಕಗಳನ್ನು ನೋಡುವ ಹುಚ್ಚಿಲ್ಲದವನಾದರೂ ಸರ್ಕಸುಗಳನ್ನು ತುಂಬಾ ನೋಡುವವನು. ಸರ್ಕಸಿನ ರಾಮಮೂರ್ತಿಯನ್ನು ಅವನು ಪ್ರಶಂಸಿಸಿದುದನ್ನು ಯಾರೂ ಕೇಳಲಿಲ್ಲ. ತಾರಾ

ಬಾಯಿಯ ಚಮತ್ಕಾರಗಳನ್ನು ಆತನು ಪ್ರಕಟಿಸಿದ್ದೂ ರಿಕಾರ್ಡಿನಲ್ಲಿಲ್ಲ ಎಂಬುದು ನಿಜ. ಆದರೆ ಸರ್ಕಸಿನ ತಮಾಷೆಗಾರನು ಬಯಲಾಟದ ಹನುಮ ನಾಯಕನಂತೆ ಪ್ರತಿಯೊಂದು ಚಮತ್ಕಾರದ ನಂತರ ತನ್ನ ಚಮತ್ಕಾರಗಳನ್ನು ತೋರಿಸುವಾಗ ಅವನಿಗೆ ಹಿಡಿಯಲಾರದ ಆನಂದವಾಗುತಿತ್ತು. ಎದೆಯ ಮೇಲೆ ಕಲ್ಲಿಟ್ಟು ತೋರಿಸುವ ಚಮತ್ಕಾರಕ್ಕಿಂತ ಕಲ್ಲಿನ ಮೇಲೆ ಎದೆಇಟ್ಟು ನಗಿಸುವ ವಿದ್ಯೆಯು ದೊಡ್ಡದಲ್ಲವೆ? ಸರಿಗೆಯ ಮೇಲೆ ತೂಕವಿಟ್ಟು ನಡೆಯುವುದಕ್ಕಿಂತ, ಸರಿಗೆಯ ಕೆಳಗಿನಿಂದಲೆ ಕೈಗಳನ್ನು ಬೀಸಿ, ಬೀಳುವವನಂತೆ ಬಿದ್ದವನಂತೆ ನಟಿಸುವ ಬುದ್ಧಿಯು ಹಿರಿದಲ್ಲವೇ? ತಾನು ನಾಲ್ಕು ಕಾಲುಗಳಿದ್ದ ಆಸನದ ಮೇಲೆ ಕೂತು ಸಂಗಾತಿಯವನನ್ನು ಮೂರು ಕಾಲುಗಳುಳ್ಳ ಕುರ್ಚಿಯ ಮೇಲೆ ಕುಳ್ಳಿರಿಸಿ, ನಾವೆಲ್ಲ ನಗುವಂತೆ ಮಾಡುವುದು ದೊಡ್ಡದಲ್ಲವೆ? ಹಾಗೆಯೇ "ಹಕ್ಕಿ ಹಾರುತಿದೆ ನೋಡಿದಿರಾ" ಎಂಬುದರೊಡನೆ "ಬೆಕ್ಕು ಹಾರುತಿದೆ ಕಂಡಿದೆಯಾ" ಎಂಬುದೂ ಇರಬೇಕಲ್ಲವೆ? "ಚಿನ್ನದ ಗನಿಗಳ ಮೈಸೂರು" ಎಂಬುದರೊಡನೆ "ಮಣ್ಣಿನ ಗೋಡೆಯ ಮೈಸೂರು" ಎಂಬುದೂ ಇರಬೇಕಾದುದಲ್ಲ? ಇಂಗ್ಲಿಷ್ ಭಾಷೆಯ "To be or not be" ಎಂಬುದು ಟೋಬಿ ಓರ್ ನೊಟ್ ಟೋಬಿ ಎಂಬುದಾದಂತೆ, ಸೊಬಗಿನ ಬಳ್ಳಿಯು ಬನಬಳ್ಳಿಯಾದರೆ ಯಾರೇಕೆ ಅನ್ಯಥಾ ಭಾವಿಸಬೇಕು? ಶ್ರೀಕಂಠಯ್ಯನಂತವರು "ಈ ನಿಮ್ಮ ಕನ್ನಡವನ್ನು ನಿಮ್ಮ ಮಡಿಲಿನಲ್ಲಿಟ್ಟಿದ್ದೇನೆ" ಎಂದು ಅಚ್ಚಗನ್ನಡದ ಮಡಿಲು ಶಬ್ದವನ್ನು ಉಪಯೋಗಿಸಿದಂದು, "ಮಡಿಲೆಂ"ದರೇನು ಎಂದು ಕನ್ನಡದ ಭಕ್ತರಾಗುವವರು ಕೇಳಿದಾಗ ನಾವು ತಾತ್ಸಾರವನ್ನು ತೋರಿಸದಿರುವುದು ಹಿತವೆ? "ಮಡಿಲೆನ್ನ ಬಾರದಿತ್ತು; ಸೆರಗೆಂದರೆ ಕಡಿಮೆಯಿತ್ತೆ?" ಎಂದು ನಂಜಿಟ್ಟು ವಿಮರ್ಶಿಸುವಾಗತಲೆದೂಗುವುದು ಹಿತವೆ?

## ೧೦. ಬಣ್ಣದ ಬೀಸಣಿಗೆ

ಬಹಳ ಹಿಂದಿನ ಕಾಲದ ಮಾತಿದು. ಆ ಕಾಲಗಳ ನೆನಪಾಗುವುದೇ ತಡ,—ಅದೆಲ್ಲವೂ ಒಸರಾಗಿ, ಒಸರು ಹೊಳೆಯಾಗಿ, ಹೊಳೆಯು ನೆರೆಯಾಗಿ, ಅಕ್ಕಪಕ್ಕದ ಮನೆಗಳೂ ಮಠಗಳೂ, ಹಳ್ಳಿಗಳೂ ಪಳ್ಳಿಗಳೂ ನೆಲಸಮವಾಗುವುದುಂಟು. ಹಾಗೆ ಅವುಗಳು ಅಳಿಯದೆ, ಸ್ವಲ್ಪ ಉಳಿದುಕೊಂಡು ಬರಲಿ,—ಎಂದು ನಾನಿದನ್ನು ಹೇಳುತಿದ್ದೇನೆ. ಹೇಳುತಿದ್ದಂತೆಯೇ, ಕಳೆದುಹೋದ

ಆ ದಿನಗಳನ್ನು ನೆನೆಯಬಹುದಲ್ಲದೆ, ಜೀವಿಸಲಿಕ್ಕಾಗುತ್ತಿಲ್ಲವೆಂದು, ದುಃಖ ಪಡುತಿದ್ದೇನೆ. ನಾನು ಕೂಡ ಭಾರವಿಯಂತೆಯೇ ಅರ್ಥಗೌರವವುಳ್ಳ ಕವಿಯಾಗಿದ್ದರೆ, ಅವನು, "ತೇ ಹಿ ನೋ ದಿವಸಾ ಗತಾಃ" ಎಂದಂತೆ, ಕನ್ನಡದಲ್ಲಿ ಅದಕ್ಕಿಂತಲೂ ಹಿರಿಮೆಯುಳ್ಳ ಮಾತನ್ನು ಸೃಷ್ಟಿಸುತಿದ್ದೆನು. ಆದರೆ ಭಾರವಿಯ ದಿವಸಗಳೂ ಆಗಿಹೋಗಿವೆ; ಆ ಅರ್ಥಗೌರವದ ಕವಿತೆಯ ಕಾಲವೂ ಮಾಸಿಹೋಗಿದೆ.

ಬಹಳೇ ಚಿಕ್ಕ ಪ್ರಾಯದಲ್ಲಿ ಸೋದರಮಾವನ ಹಳ್ಳಿಗೆ ನಾನೊಂದು ಮದುವೆಯ ಮಂಗಲಕ್ಕಾಗಿ ಹೋಗಿದ್ದೆನು. ಆ ಕಾಲದ ಮದುವೆಗಳಿಗೂ ಈ ಕಾಲದ ಮದುವೆಗಳಿಗೂ ಅಜಗಜಾಂತರವಿದೆಯಷ್ಟೆ? ಏಳೆಂಟು ದಿವಸಗಳು ಅವ್ಯಾಹತವಾಗಿ ಊಟಗಳು ಫಲಾಹಾರಗಳು, ವಾದ್ಯಗಳು ಇಸ್ಪೀಟುಗಳು, ಮಂತ್ರಗಳು ತಂತ್ರಗಳು, ಮರೆಗಳು ಮೋಸಗಳು, ಹರಟೆಗಳು ಕಳವುಗಳು, ಎಂದು ಇವುಗಳೆಲ್ಲದರ ಏಕಸನ್ನಿಪಾತವಾಗಿ ಉಮ್ಮೊದ್ದ ಬೆಳೆಯುತಿದ್ದವು. ಇಂದಿನ ದಿನವೆಂದರೆ, ಬೆಳಗ್ಗೆ ಕಾಗೆ ಎದ್ದು ಕೂಗುವಾಗ ಬಂದ ದಿಬ್ಬಣವು ಕಾಗೆ ಮರಳಿ ಗೂಡಿಗೆ ಹಾರುವುದರೊಳಗೆ ಚದರಿಹೋಗುತ್ತಿದೆ. ಊಟವಿದ್ದರೂ ಉಣ್ಣುವುದಿಲ್ಲ; ವಾದ್ಯವಿದ್ದರೂ ಮಂತ್ರವಿಲ್ಲ; ಕಳವು ಇದ್ದರೂ ಮೋಸವಿರುವುದಿಲ್ಲ. ಇಂತಹ ಮದುವೆಯ ಸಂಭ್ರಮಗಳಲ್ಲಿ ಭಾಗಿಯಾಗಿ ಸಂಸಾರವೆಲ್ಲ ನಿಸ್ಸಾರವಾಗುತ್ತಿದೆ, ಎಂದು ಭ್ರಮಿಸಿಕೊಳ್ಳುವ ನನ್ನಂತಹವರಿಗೆ, ಸೋದರಮಾವನ ಹಳ್ಳಿಯಲ್ಲಿ, ಸೋದರಮಾವನ ಮನೆಯಲ್ಲಿ, ಸೋದರಮಾವನ ಮಗಳಿಗಾದ ಮದುವೆಯ ಸಂಭ್ರಮವನ್ನು ನೆನೆದು ಬಾಯಲ್ಲಿ ನೀರು ತಂದುಕೊಳ್ಳುವುದು, ಭಾರವಿಯ ಮನೋಭಾವನೆಯನ್ನು ತಳೆಯುವುದಲ್ಲದೆ ಮತ್ತೇನಾಗಿದೆ?

ಮದುವೆಯ ಮನೆಯೆಂದರೆ, ಆ ಕಾಲದಲ್ಲಿ, ಒಂದು ಚಿಕ್ಕ ಬ್ರಹ್ಮಾಂಡವೆ ಆಗಿದ್ದಿತು. ಯಾವ ಕೋಣೆ ನೋಡಿದರೂ, ಆ ಕೋಣೆ ಒಂದು ಉಗ್ರಾಣ. ಉಗ್ರಾಣದಲ್ಲಿ ಎಣ್ಣೆಯಲ್ಲಿಯೂ ತುಪ್ಪದಲ್ಲಿಯೂ ಹುರಿದ ಚಕ್ಕುಲಿ, ತಿಂಗಳೊಡೆ, ಕಾರಕಡ್ಡಿ, ಶಾವಿಗೆ, ಅಂಬೊಡೆ, ಉಂಡೆ ಮೊದಲಾದ ತಿಂಡಿಗಳನ್ನು ಡಬ್ಬಿಗಳಲ್ಲಿ ತುಂಬಿಸಿಡುತಿದ್ದರು. ಒಕ್ಕಲುಗಳು ತಂದೊಪ್ಪಿಸಿದ ಬಾಳೆಹಣ್ಣು, ಕುಂಬಳ, ಸೌತೆಕಾಯಿ, ಚೀನಿಕಾಯಿ ಮೊದಲಾದ ಹಣ್ಣುಗಳನ್ನೂ ಕಾಯಿಗಳನ್ನೂ ಅಂಕೆಯಿಲ್ಲದಷ್ಟು ಕೂಡಿಸುತಿದ್ದರು ಆದರೆ ಇವುಗಳೆಲ್ಲವನ್ನೂ

ಭದ್ರವಾಗಿಟ್ಟುಕೊಂಡು ನಿರರ್ಥಕವಾಗಿ ಹಾಳಾಗಬಿಟ್ಟರೂ, ದುರ್ವ್ಯಯ ವಾಗದ ಹಾಗೆ ತಕ್ಕ ತನಿಖಿಯನ್ನು ಯಾರಾದರೊಬ್ಬನಾದರೂ ಮಾಡದೆ ಇರುತಿದ್ದಿಲ್ಲ.

ಪಟ್ಟಣದಿಂದ ಬಂದ ನಾನು, ಹಳ್ಳಿಯ ಹುಡುಗರಿಗಿಂತ ಹೆಚ್ಚಿನ ಚಾತುರ್ಯದವನಿರಬೇಕೆಂದು ಎಲ್ಲವರ ಗ್ರಹಿಕೆಯಾಗಿದ್ದಿರಬೇಕು. ಹಿರಿಯವರ ಮಕ್ಕಳು ತೀರ ಹತ್ತಿರದ ಸಂಬಂಧವಾದರೆ, ಅವರ ಬುದ್ಧಿಶಕ್ತಿಯು ಇನ್ನೂ ಕಳೆಯೇರುವುದಿದೆ. ಅಂತೂ ನಾನು ಹಳ್ಳಿಗೆ ಬಂದ ದಿವಸವೆ ನನ್ನೊಡೆಗೆ ಅವರೆಲ್ಲರ ಮನಸ್ಸು ಹರಿಯುವಂತೆ ಮಾಡಿಬಿಟ್ಟೆನು. ಆಗಲಿಕ್ಕೆ ನಾನು ಪ್ರತ್ಯುತ್ಪನ್ನಮತಿಯೆ ಅಹುದು; ಪ್ರತ್ಯುತ್ಪನ್ನಮತಿಯಾಗಿ ಇದರ ಎಲ್ಲ ಹಕ್ಕು ಬಾಧ್ಯತೆಗಳನ್ನು ಅನುಭವಿಸಿದ್ದೂ ಉಂಟು. ನಾನು ನಾಲ್ಕನೆಯ ತರಗತಿಯಲ್ಲಿ ಓದುತಿದ್ದೆನೆಂದೂ, ಮಹಾ ತಂಟೆಖೋರನೆಂದೂ, ಓದುಕಲಿವಿನಲ್ಲಿ ಅಷ್ಟು ಮುಂದಿಲ್ಲವಾದರೂ ಏನು ಮಾಡಲಿಕ್ಕೂ ಹೇಸೆನೆಂದೂ ಅವರವರು ಅವರವರಷ್ಟಕ್ಕೆ ಹೇಳುತಿದ್ದರು. ನಾನದನ್ನು ಕಿವಿಗೊಟ್ಟು ಕೇಳಿದರೂ ನಿರ್ಲೋಭಿಯಂತೆ ವರ್ತಿಸುತಿದ್ದೆನು.

ಬಂದ ದಿವಸವೆ ಊಟವಾದೊಡನೆಯೆ, ನನಗೂ ತಿನ್ನಲಿಕ್ಕೆ ಎರಡು ಮಾವಿನ ಹಣ್ಣುಗಳನ್ನು ಕೊಟ್ಟಿದ್ದರು. ಅಲ್ಲಿದ್ದವರೆಲ್ಲರೂ ತಮ್ಮ ಹಣ್ಣುಗಳನ್ನು ತಿನ್ನುತಿದ್ದಾಗ ನಾನು ಫಕ್ಕನೆ, “ಇಲ್ಲಿದ್ದ ಈ ಎರಡು ಹಣ್ಣುಗಳನ್ನು ಮೂರಾಗಿ ತೋರಿಸಬೇಕೆ?” ಎಂದು ಸವಾಲುಮಾಡಿದೆನು. ನನ್ನನ್ನು ಹೊಗಳುವುದರಲ್ಲಿ ಮೊದಲಿಗನಾದ ಕಿರಿಯ ಸೋದರಮಾವನು, “ಭಲೆ, ಮಾಡಿತೋರಿಸು! ಮೂರಾಗುವುದಾದರೆ ಆ ಮೂರಕ್ಕೆ ಇನ್ನು ಮೂರನ್ನು ಸೇರಿಸಿ, ಆರು ಮಾಡಿಕೊಡುತ್ತೇನೆ!” ಎಂದನು. ಪಟ್ಟಣದ ಶಾಲೆಗಳಲ್ಲಿ ಇಂಗ್ಲೀಷ್ ಪದ್ಯದಲ್ಲಿ ಇದನ್ನು ಕಲಿತಿದ್ದೆನೆಂದು ಹಳ್ಳಿಯ ಶಾಲೆಯ ಮಕ್ಕಳೂ ಅದನ್ನು ಓದಿರಬಹುದೆಂದು ಊಹಿಸಲಾಗುತಿದ್ದಿಲ್ಲ. ನಾನು ಮಾಡಲಿಕ್ಕಿದ್ದ ಇಂದ್ರಜಾಲವನ್ನು ನೋಡುವುದಕ್ಕೆಂದು ನನ್ನ ಪ್ರಾಯದ ಮಕ್ಕಳೆಲ್ಲರೂ, ಬಾಯಲ್ಲಿ ಮಾವಿನ ಗೊರಟನ್ನು ಚೀಪುತ್ತಲೆ ಎದ್ದು ನಿಂತರು. ಮನೆಯೊಳಗಿಂದ ಚಿಕ್ಕ ಪ್ರಾಯದ ಹೆಂಗಸರೆಲ್ಲರೂ ಹೊರಜಗುಲಿಗೆ ಓಡಿಬಂದರು. ಅಂಗಳದಲ್ಲಿ ಆಳುಗಳೆಲ್ಲರೂ ಕತ್ತನ್ನು ಉದ್ದಮಾಡಿ ನಿಂತರು.

"ನೋಡಿ - ಇಲ್ಲಿ ನೋಡಿ—ಎರಡು ಹಣ್ಣುಗಳಿವೆ," ಎಂದು ನಾನು ಮೊದಲುಮಾಡಿದೆನು.

"ನೋಡುತ್ತಿದ್ದೇವಲ್ಲ!" ಎಂದು ಹಿರಿಯ ಸೋದರಮಾವನು ನಕ್ಕುಬಿಟ್ಟನು.

"ನೋಡಿ, ಇದು-ಒಂದು; ನೋಡಿ, ಇದು-ಎರಡು. ಈ ಒಂದನ್ನು ಈ ಎರಡಕ್ಕೆ ಕೂಡಿಸುತ್ತೇನೆ-ಮೂರಲ್ಲವೆ, ಈಗ?" ಎಂದು ನಿಧಾನವಾಗಿಯೇ ಹೇಳಿ ತೋರಿಸಿದೆನು.

ಹಿರಿಯ ಸೋದರಮಾವನು ತಲೆಯಲ್ಲಾಡಿಸಿ, "ಭೇಷ್!" ಎಂದನು. ನನ್ನ ಓರಗೆಯ ಬಾಲಕರು ಇನ್ನೂ ಗೊರಟನ್ನು ಚೀಪುತ್ತಿದ್ದು ಅವರಲ್ಲಿ ಕೆಲವರ ಮೈಮೇಲೆ ಮಾವಿನರಸವು ಇನ್ನೂ ಇಳಿಯುತ್ತಿತ್ತು. ದೊಡ್ಡ ಮಕ್ಕಳು ಹುಬ್ಬುಗಳನ್ನು ಆಕುಂಚಿಸಿ ನನ್ನನ್ನೆ ದಿಟ್ಟಿಸಹತ್ತಿದರು. ಹೆಂಗಸರು, "ಇದೆಂತಹ ಮ್ಯಾಜಿಕ್! ಅಯ್ಯ ..ಯ್ಯೋ!" ಎಂದು ಕೊನೆಯ ಶಬ್ದವನ್ನು ಶಿಥಿಲದ್ವಿತ್ವವನ್ನಾಗಿಯೆ ಉಚ್ಚರಿಸುತ್ತ ಒಳಸೇರಿದರು. ಆಳುಗಳು ಯಾವ ವಿಶೇಷವನ್ನೂ ಕಾಣದೆ ತಮ್ಮತಮ್ಮ ಬಿಟ್ಟಿಬೇಗಾರಿಗೆ ನಡೆದರು.

ಅದೇ ದಿನ ಸಾಯಂಕಾಲ ವಧೂವರರುಗಳಿಗೆ ಮಂಗಳಸ್ನಾನದ ಉಪಚಾರವಿದ್ದು, ಊಳಿಗದ ವಾದ್ಯವಾಗುತ್ತಿತ್ತು. ವಾದ್ಯದ ಮೇಳದವರ ಸುತ್ತಾಗಿ ನಾವೆಲ್ಲರೂ ನೆರೆದಿದ್ದೆವು. ವಾದ್ಯದ ಗುರಿಕಾರನ ಕೈಗೆ ಬಂಗಾರದ ಬಳೆಯೊಂದು ಇದ್ದಿತು. ಅದನ್ನು ಪ್ರದರ್ಶಿಸಲಿಕ್ಕೋ ಎಂಬಂತೆ, ಆತನು ತನ್ನ ಕೈಗಳನ್ನು ಮೇಲಕ್ಕೆತ್ತಿ ಮುಪುರಿಯನ್ನು ಗಾಳಿಯಲ್ಲಿ ಅತ್ತಿತ್ತ ತಿರುಗಾಡಿಸಿ, ತನ್ನ ಸಂಗೀತಕ್ಕೆ ತಾನೆ ಮೆಚ್ಚಿದವನಂತೆ ತಲೆಯಲ್ಲಾಡಿಸಿ ನಾನಾತರದ ವಿಕಾರಗಳನ್ನೂ ಚೇಷ್ಟೆಗಳನ್ನೂ ಮಾಡುತ್ತಿದ್ದನು. ಅಂತಹ ವಿಕಾರಗಳನ್ನು ಕಂಡೂ ತಲೆದೂಗದ ನಾನು ಬೇಸರಹೋಗಿ, ಚೀಲದಿಂದ ಹುಣಿಸೆಹಣ್ಣನ್ನು ತೆಗೆದು ಚೀಪಲಾರಂಭಿಸಿದೆನು. ಮುವುರಿಯನ್ನು ಊದುವ ಗುರಿಕಾರನು, ನಾನು ರುಚಿಯಿಂದ ಹುಣಿಸೆಹಣ್ಣು ತಿನ್ನುವುದನ್ನು ನೋಡಿದೊಡನೆ, ಮುಖದಲ್ಲಿ ಬೇರೆ ವಿಕಾರಗಳನ್ನು ತೋರಹತ್ತಿದನು. ಅವನು ಮುಖವನ್ನು ಆಕುಂಚಿಸಹತ್ತಿದನು; ಮುವುರಿಯನ್ನು ಮೇಲಕ್ಕೆತ್ತಿದನು. ಮುವುರಿಯಲ್ಲಿ ಬಾಯನೀರು ಇಳಿಯಿತೋ, ಸ್ವರವು ಗಂಟಲೊಳಗೆ ಹಿಸುಕಲ್ಪಟ್ಟಿತೊ, ಏನೊ; ಮುವುರಿಯನ್ನು ಬಾಯಿಂದ ತೆಗೆದುಬಿಟ್ಟನು. ನಾಗಸ್ವರವನ್ನು ಊದುವ ಮುದುಕನು

ಮುಖಕೆಳವಾಡಿಯೆ ಊದುವುದಲ್ಲವೆ? ನಾಗಸ್ವರವು ನಿರಾತಂಕವಾಗಿ ಊದುವ ವಾದ್ಯಸಾಧನವಲ್ಲವೆ? ನಾಗಸ್ವರದಲ್ಲಿಯೂ ನೀರು ಇಳಿಯಿತು; ಮುಖವನ್ನು ಮುದುಕನು ಮೇಲ್ಮಾಡಿ ಊದತೊಡಗಿದನು. ನಾಗಸ್ವರವು ಅಪಸ್ವರವಾಯಿತು. ಬಾಯನೀರು ನಾಗಸ್ವರದಿಂದ ತಿರುಗಿ ಬಾಯೊಳಗೆ ಬಂದು, ಮುದುಕನ ಉಸಿರು ಕಟ್ಟಿತು. ಉಳಿದ ವಾದ್ಯಗಾರರ ಮೇಳ-ತಾಳಗಳೆಲ್ಲ ತಪ್ಪಿದುವು; ಗುರಿಕಾರನು ಬೆಪ್ಪಗಾದನು. ವಾದ್ಯದವರಿಗೇನು ಸಂಕಟ ಬಂದಿದೆಯೆಂದು ಒಳಗಿಂದ ಹೆಂಗುಸರು ಆಕ್ಷೇಪವೆತ್ತಿದಾಗ, ನನ್ನ ಹಿರಿಯ ಸೋದರಮಾವನು ಹೊರಗೆ ಬಂದು, ವಾದ್ಯದವರ ಎದುರು ನಿಂತು ಹುಣಿಸೆಯ ಅಸ್ತ್ರವನ್ನು ಬೀಸಿದ ನನ್ನನ್ನು ಕಂಡು, "ಘಟಿಂಗಾ, ಪಟ್ಟಣದ ಪೋಕರಿಯನ್ನು ಇಲ್ಲಿ ತಂದೆಯಾ? ನಡೆ!" ಎಂದು ಗದರಿಸಿಬಿಟ್ಟನು.

ನಾನು ಚತುರಮತಿಯೆಂದು ಎಲ್ಲರೂ ನನ್ನ ಮೇಲೆ ಕಣ್ಣಿಡಲು ತೊಡಗಿದ್ದರು. ನನಗಿಂತ ಚಿಕ್ಕ ಪ್ರಾಯದ ಹುಡುಗಿಯರು ನನ್ನನ್ನು ಕಂಡೊಡನೆ ಒಳಗೆ ನುಸುಳುತ್ತಿದ್ದರು. ನನ್ನಷ್ಟೇ ಪ್ರಾಯದ ಗಂಡು ಮಕ್ಕಳು ನನ್ನೊಡನೆ ಗದ್ದೆಗದ್ದೆಗಳನ್ನು ಪುಡಿಮಾಡಿ, ನನಗೆ ಗೇರುಹಣ್ಣು, ಮಾವಿನಹಣ್ಣು ಮೊದಲಾದುವುಗಳ ಪರಿಚಯ ಮಾಡಿಕೊಡುತ್ತಿದ್ದರು. ನನಗಿಂತ ಹೆಚ್ಚು ಪ್ರಾಯದವರು ಇಂಗ್ಲಿಷ್ ಶಬ್ದ ನಿರ್ಮಾಣದ ಆಟಕ್ಕಾಗಿ ನನ್ನನ್ನು ಕರೆಯುತ್ತಿದ್ದರು. ಮುದುಕಿಯರು ನನಗೆ ಪದ ಹೇಳಲು ಕೇಳಿಕೊಳ್ಳುತ್ತಿದ್ದರು. ಮುದುಕರು ನನ್ನೊಡನೆ ಇಂಗ್ಲಿಷ್ ಮಾತಾಡಲು ಹೇಳುತ್ತಿದ್ದರು. ಆಳುಗಳಲ್ಲಿ ಕೆಲವರು ಮೆಲ್ಲನೆ ಬಂದು, ತಮ್ಮ ಮಕ್ಕಳಿಗೆಂದು ಶರ್ಟುಗಳನ್ನೂ ಕೋಟುಗಳನ್ನೂ ಬೇಡುತ್ತಿದ್ದರು.

ಬಂದ ಕೆಲದಿನಗಳಲ್ಲಿಯೇ ನನ್ನ ಉತ್ಸಾಹ, ನನ್ನ ಬುದ್ಧಿ ಚಮತ್ಕಾರ, ನನ್ನ ಚಟುವಟಿಕೆ ಎಲ್ಲ ಇಳಿದುಬಂದಂತೆ ತೋರಿತು. ನನ್ನ ನಡತೆಯಲ್ಲಿದ್ದ ಕಪಿತ್ವ ಕಡಿಮೆಯಾದಂತಾಗಿ, ದಿವಸಗಳು ನನಗೆ ಗದ್ಯಮಯವಾಗಹತ್ತಿದುವು. ನೋಡಿದ ಹಕ್ಕಿಗಳೇ ಚಿಲಿಪಿಲಿಗುಟ್ಟುತ್ತಿದ್ದುವು. ರುಚಿ ನೋಡಿದ ಕಾಯಿಪಲ್ಯಗಳೇ ತಿರುತಿರುಗಿ, ಒತ್ತಾಯವಾಗಿ ಎಂಬಂತೆ, ಬರುತ್ತಿದ್ದುವು. ಮಾತನಾಡುವ ಉತ್ಸಾಹ ಕಡಿಮೆಯಾಗಹತ್ತಿತು; ಹೊಸಬರು ಬಂದವರು ಇವನಾರೆಂದು ಕೇಳುತ್ತಿದ್ದರೂ ವಿಶೇಷ ಗಮನಕೊಡದೆ, ಪಟ್ಟಣದವನಾಗಿದ್ದರೂ ಹಳ್ಳಿಯವರ ಜೊತೆಯುಲ್ಲಿದ್ದವನನ್ನು ಹಳ್ಳಿಗರ ನಾಲಿಗೇ ಸೇರಿಸಿ, ಪಟ್ಟಣದಿಂದ

ಹೊಸದಾಗಿ ಬಂದ ಮಕ್ಕಳ ಕಡೆಗೆ ಎಲ್ಲರೂ ಕೊಡುವಂತೆ ತಾವೂ ತಮ್ಮ ಗಮನ ಕೊಡುತ್ತಿದ್ದರು. ಅಂತೂ ನನ್ನ ಪ್ರತ್ಯುತ್ಪನ್ನಮತಿತ್ವದ ಜೀವನದ ಆತ್ಮಹತ್ಯೆಯೊ, ಅಕಾಲ ಮರಣವೊ ಬಂದೊದಗಿದಂತಾಯಿತು.

ಹಳ್ಳಿಯ ಗದ್ದೆಗಳಲ್ಲಿ, ಗದ್ದೆಗಳ ಬದಿಯ ಮರಗಳಲ್ಲಿ, ಮರಗಳ ಮೇಲಿನ ಹಣ್ಣುಗಳಲ್ಲಿ ಧೈರ್ಯ, ಶೌರ್ಯ, ಉತ್ಸಾಹಗಳನ್ನೆಲ್ಲ ತೋರಿಸಿ ಒಮ್ಮೆ ಬಹಳ ಬಳಲಿದ್ದೆನು. ಮನೆ ಸೇರುತ್ತಲೆ, ಪುಣ್ಯವಶಾತ್ ಉಗ್ರಾಣದ ಒಳ ಯಾರೂ ಇಲ್ಲದುದನ್ನು ಕಂಡು ಒಳಹೊಕ್ಕು ಒಂದು ಡಬ್ಬಿಯ ಬೀಗಮುರಿದು, ಕ್ಷಣಾರ್ಧದಲ್ಲಿ ಎಂಬಂತೆ ಅದನ್ನು ಬರಿದುಮಾಡಿ, ಅಲ್ಲಿಯೆ ಒಂದು ಮೂಲೆಯಲ್ಲಿ ಹತ್ತು ನಿಮಿಷ ಅಡಗಿಕೊಂಡಿದ್ದು, ಮತ್ತೆ ಧೈರ್ಯಹೊಂದಿ ಹೊರನುಸುಳಿದೆನು. ಎಲ್ಲವೂ ನಿಸ್ತಬ್ಧವಾಗಿತ್ತು. ಉಗ್ರಾಣದ ಸಮೀಪವಾಗಲಿ, ದೂರವಾಗಲಿ, ಯಾರೂ ಇದ್ದಂತೆ ತೋರಲಿಲ್ಲ. ಹೆಂಗುಸರು, ಮಕ್ಕಳು, ಗಂಡಸರು ಮೊದಲಾಗಿ ಎಲ್ಲವರೂ ಏನೋ ತಮ್ಮತಮ್ಮ ಕೆಲಸಕ್ಕೆ ಹೋಗಿದ್ದರು. ದೂರದಲ್ಲಿ ಒಬ್ಬ ಆಳು ಏನನ್ನೊ ಕುಟ್ಟುತ್ತಿದ್ದಾನೆ. ಒಬ್ಬಳು ಮುದಿ ಹೆಂಗಸು ಗೋಡೆಯ ಬದಿಯಾಗಿಯೆ ನಡೆಯುತ್ತಿದ್ದಾಳೆ. ಕಪ್ಪಗಿನ ಮನೆ-ಬೆಕ್ಕು ಮನೆಯ ಮಾಡಿನಲ್ಲಿ ನಡೆಯುತ್ತಿದೆ. ಕಿಟ್ಟು, ಮನೆಯೊಳಗಿಂದು ಹೊರಬಂದು. ಅತ್ತಿತ್ತ ನೋಡಿ ಒಳಹೋಗುತ್ತಿದ್ದಾನೆ. ಮನೆಯ ನಾಯಿ, ಮಾರ್ಗದ ಬದಿಯಲ್ಲಿ ದಾರಿಹೋಕರನ್ನು ಕಂಡೊ ಏನೊ, ಬೊಗಳುತ್ತಿದೆ. ಏನು, ನನ್ನ ಸೋದರಮಾವನು ಎಲ್ಲಿಗೆ ತೆರಳಿದ್ದಾನೆ? ಇಲ್ಲ, ಅವನು ಅಲ್ಲಿಯೇ ಬರುತ್ತಿದ್ದಾನೆ.

"ಮಾವಾ, ಊರಿಗೆ ಮರಳುವಾಗ, ನನಗೆ ಒಂದು ಬಣ್ಣದ ಬೀಸಣಿಗೆ ಕೊಡುತ್ತೀಯಲ್ಲ?" ಎಂದು ಕೇಳಿದೆನು.

"ಯಾವ ಬೀಸಣಿಗೆ ಬೇಕಾದರೂ ಕೊಂಡುಹೋಗು, ಆದರೆ ಯಾರನ್ನೂ ಮಾತ್ರ ನೋಯಿಸಬೇಡ!" ಎಂದವನು ಮುಂದಕ್ಕೆ ನಡೆದನು.

ಮರುದಿನ ಮಧ್ಯಾಹ್ನದ ಊಟ ಮುಗಿದ ನಂತರ, ಎಲ್ಲವರೂ ಹೊರ ಚಾವಡಿಯಲ್ಲಿ ತಾಂಬೂಲಕ್ಕಾಗಿ ಸೇರಿದ್ದರು. ಮಾವನು ತಾಂಬೂಲಕ್ಕೆ ಸುಣ್ಣಬಳಿಯುವನು ಫಕ್ಕನೆ, ''ಇವತ್ತು ಕೋದಂಡನ ಜೋತಿಷ್ಯವಾಗಬೇಕು," ಎಂದನು.

ಕಿರಿಯ ಸೋದರಮಾವನು, "ಹೌದು, ಆದಾಗಲೇ ಬೇಕು!" ಎಂದು, ಒಳಗೆ ಏನೋ ತರಲಿಕ್ಕೆಂದು ನಡೆದೇಬಿಟ್ಟನು.

"ನನ್ನಿಂದಾಗದು, ನಾನದನ್ನು ಕಲಿತಿಲ್ಲ!" ಎಂಬುದು ನನ್ನದು ವಿನಯದ ಮಾತು.

"ಎಂದರೇನು? ನೀನು ಕಲಿಯಬೇಕಿಲ್ಲ. ಏನು ಹೇಳಿದರೂ ಅದು ಸರಿಯಾಗುತ್ತದೆ!"

ಇಷ್ಟರೊಳಗೆ ಕಿರಿಯ ಸೋದರಮಾವನು ಒಳಗಿಂದ ಬಂದು, ಒಂದು ಕೆಂಪು ಎಲವಸ್ತ್ರದಿಂದ ನನ್ನ ತಲೆಗೆ ರುಮಾಲನ್ನು ಕಟ್ಟಿದನು. ತನ್ನ ಶಾಲನ್ನು ನನ್ನ ಭುಜದ ಮೇಲಿಟ್ಟನು. ನಾನುಟ್ಟ ವಸ್ತ್ರದ ಮೇಲೆ ಇನ್ನೊಂದು ದೊಡ್ಡ ವಸ್ತ್ರವನ್ನು ಸುತ್ತಿಸಿ ಪಂಚೆಕಚ್ಚೆಯುಟ್ಟ ಬ್ರಾಹ್ಮಣನನ್ನಾಗಿ ಮಾಡಿದನು. ಎಲ್ಲಿಂದಲೊ ಒಂದು ಯಜ್ಞೋಪವೀತವನ್ನು ತಂದು ಕೊರಳಿಗೆ ಹಾಕಿದನು. ಹಣೆಗೆ ಬೊಟ್ಟನ್ನಿಟ್ಟು ಕಸ್ತೂರಿಯನ್ನು ಎಳೆದನು. ಮಣೆ ಕೊಟ್ಟು, "ಕುಳ್ಳಿರೆಂ" ದನು. ಇನ್ನೊಂದು ಮಣೆಯ ಮೇಲೆ ಒಂದು ಮುಷ್ಟಿ ಬೆಳ್ತಿಗೆ ಅಕ್ಕಿಯ ಕಾಳು ಗಳನ್ನು ಸುರಿದನು. ಬಲಿಗಾಗಿ ಕೊಂಡೊಯ್ಯಲ್ಪಡುವ ಕುರಿ, "ಆಗದು!" ಎನ್ನಲಾಗುವುದೆ? ನಾನು ಮಣೆಯನ್ನು ಸ್ವೀಕರಿಸಿದೆನು.

ಯಾರೋ ಒಂದು ಬೆಳ್ಳಿ ಕಾಣಿಕೆಯನ್ನು ತಾಂಬೂಲದೊಡನೆ ತಂದಿಟ್ಟು ನಮಸ್ಕರಿಸಿ, "ಒಂದು ಪ್ರಶ್ನೆಯಿದೆ, ಉದಾಹರಣೆಯಾಗಬೇಕು!" ಎಂದರು.

ತುಂಬ ಜನಸ್ತೋಮವಿದೆ; ಹಿರಿಯರು-ಕಿರಿಯರು, ಹೆಂಗುಸರು-ಗಂಡು ಸರು, ಮಕ್ಕಳು-ಮರಿಗಳು,-ಎಲ್ಲರೂ ಸೇರಿದ್ದಾರೆ ನಾನೇನು ಉದಾಹರಣೆ ಕೊಡಬಲ್ಲೆ? ಕೊಟ್ಟ ಉದಾಹರಣೆ ಸತ್ಯವಾಗಬೇಕು, ಇಲ್ಲದಿದ್ದರೆ ನನ್ನ ಪಟ್ಟಣಕ್ಕೆ ಅವಮಾನವಾದಂತೆ! ಒಂದು ನಿಮಿಷ ಆಲೋಚನೆ ಮಾಡಿ, ಸತ್ಯಾಂಶವನ್ನು ತಿಳಿದಿದ್ದೇನೆ ಎಂಬ ಆ ಮನಸ್ಸಿನ ದಾರ್ಢ್ಯದಿಂದಲೇ, ಅಭಿ ಮಾನದಿಂದಲೇ ಹೇಳಿಬಿಟ್ಟೆನು:

"ನಷ್ಟಂ, ನಷ್ಟಮಿದಂ ಜಗತ್! ಕಳವಾಗಿದೆ! ಇನ್ನೂ ಕಳವು ನಡೆಯ ಬಹುದು!"

"ಏನು ಕಳವು?"

"ಅದು ಗುಟ್ಟಿನಲ್ಲಿ ನಡೆದದ್ದು, ಅಮೂಲ್ಯವಾದರೂ ಬಹಳ ಬೆಲೆ ಬಾಳುವುದಿಲ್ಲ."

"ಎಂದರೆ, ಇಂದಿನ ಬೆಳಿಗ್ಗೆ ನನ್ನ ಯಜ್ಞೋಪವೀತ ಕಡಿದಂತೆ ಇತ್ತು, ಅದೇನು?"

"ಅಲ್ಲ. ಅದು ಇಲಿಯ ಕೆಲಸ!" ಎಂದು ನಾನೆಂದೆ.

"ಹೌದು, ಅದು ಪಟ್ಟಣದ ಇಲಿಯ ಪೋಕರಿ!" ಎಂದು ರಾಮು ಹೇಳಿದನು; ಎಲ್ಲರೂ "ಖೋ" ಎಂದು ನಕ್ಕರು.

"ನಿನ್ನೆ ಯಾರ ತಲೆಯ ಕೂದಲು ಕತ್ತರಿಸಿದೆ. ಅದು ಯಾವ ಇಲಿಯ ಕೆಲಸ?" ಎಂದು ಕಿರಿಯ ಸೋದರತ್ತೆಯ ಪ್ರಶ್ನೆಯಿದು.

"ಇಲಿಗಳಲ್ಲಿ ನಾನಾ ಜಾತಿಗಳಿವೆ, ದೊಡ್ಡಿಲಿ ಸಣ್ಣಿಲಿ, ಅಕ್ಕಿಲಿ ತಂಗಿಲಿ, ಅಣ್ಣಿಲಿ ತಮ್ಮಿಲಿ,—ಇವುಗಳಲ್ಲಿ ಒಂದಾಗಿರಬೇಕು!" ಎಂದು ಪುಟ್ಟಪ್ಪನ ಶಿಷ್ಯನು ಎದ್ದು ನೆಗಾಡಿದನು.

"ಕಳವು ಮಾಡಿದವರು ಹಿಂದೆಮುಂದೆ ನೋಡಿಯೇ ಮಾಡಿದ್ದಾರೆ!." ಎಂದು ಜೋತಿಷಿಯು ವಿಷಯವನ್ನು ತಿರುಗಿ ಪ್ರಸಂಗಕ್ಕೆ ತಂದನು.

ಸಭೆಯಲ್ಲಿ ಕುಳಿತ ಕಿಟ್ಟುವಿನ ಮುಖ ವಿವರ್ಣವಾಯಿತು; ಅವನೆದ್ದು ಹೊರಕ್ಕೆ ನಡೆದನು.

ಯಾರೂ ಮಾತೆತ್ತುವುದಿಲ್ಲ. ಪ್ರಸಂಗ ಮುನ್ನಡೆಯುವುದಿಲ್ಲ. "ತಮಾಷೆಗಾಗಿಯೇ ಇರಬಹುದು!" ಎಂದು ಪುನಃ ಉದಾಹರಣೆ.

ಸಭೆಯ ಮಧ್ಯದಲ್ಲಿದ್ದ ಗಯ್ಯಾಳಿ ಲಿಲ್ಲಿಯು, "ಅಕ್ಕನ ಕಣ್ಣಿನ ಕಾಡಿಗೆಯ ರೇಖೆ ಕಳವಾಗಿದೆಯಂತೆ!" ಎಂದು ನಗುತ್ತ ಸುಶಿಯ ಗಂಡನ ಕಡೆಗೆ ನೋಡಿದಳು. ಎಲ್ಲರ ಕಣ್ಣುಗಳೂ ಒಡನೆಯೆ ಆತನ ಕಡೆಗೆ ಉರುಳಿದುವು. ಆತನು ತನ್ನ ಮುಖಕಮಲವನ್ನು ಎತ್ತುವಾಗ, ಸುಶಿಯೂ ಕಡೆಗಣ್ಣಿನಿಂದ ಆತನನ್ನೇ ನೋಡುತ್ತಿದ್ದಳು. ಎಲ್ಲರ ತುಟಿಗಳಲ್ಲಿ ಕಿರುನಗೆ! ಸುಶಿಯು ಮಾತ್ರ ಮಾತೆತ್ತಳು.

"ಹಾಗಲ್ಲದಿದ್ದರೂ ಹೊಟ್ಟೆಯ ಪಾಡಿಗಾಗಿಯೂ ಇರಬಹುದು!" ಇದು ಜ್ಯೋತಿಷಿಯ ಹೊಸ ಸಿದ್ಧಾಂತ.

ಸಭೆಯ ಹಿಂಬದಿಯಲ್ಲಿದ್ದ ದೇವಕಿಯು, ಕೆಮ್ಮು ಮೇಲಿಂದ ಮೇಲೆ ಬಂದವಳಾಗಿ, "ಅಮ್ಮಮ್ಮಾ!" ಎಂದು ಹೊರ ತೆರಳಿದಳು.

"ಕದ್ದವನು ಯಾರೆಂದಿಲ್ಲವೆ?" ಎಂದು ಕಿರಿಯ ಸೋದರ ಮಾವನು ತೃಪ್ತನಾಗದೆ ಕೇಳಿಯೇ ಬಿಟ್ಟನು.

ಇಷ್ಟರೊಳಗೆ ಊರ ಪಠೇಲರು ಏನೋ ಕೆಲಸದ ನಿಮಿತ್ತ ಬಂದುದರಿಂದ ನಮ್ಮ ಜ್ಯೋತಿಷ್ಯದ ತಮಾಷೆ ಮುಗಿಯಿತು.

ನನ್ನ ವೇಷವನ್ನೆಲ್ಲ ಕಳಚಿ ಸ್ವತಂತ್ರನಾಗಿಬಿಟ್ಟು, ನಾನು ಹಿತ್ತಲಿಗೆ ಓಡಿದೆನು. ಅಲ್ಲಿ ಕಿಟ್ಟು ನಾನಿದ್ದೆಡೆಗೆ ಬಂದು, "ಹೌದೋ, ಕೋದಂಡಾ! ನಾನು ಕದ್ದದ್ದೆಂದು ನಿನಗೆ ಹೇಗೆ ತಿಳಿಯಿತು?" ಎಂದು ಕೇಳಿದನು.

"ನೀನೇನು ಕದ್ದೆ?" ಎಂದೆ.

"ಮದುಮಗನಿಗೆಂದು ಮಾಡಿದ ಮಿಠಾಯಿ ಎಲ್ಲಾ!"

"ಎಲ್ಲಾ ನೀನೊಬ್ಬನೇ ತಿಂದೆಯೊ? ನನ್ನನ್ನೂ ಕರೆಯಬಹುದಿತ್ತಲ್ಲ!"

"ಕರೆಯಲಿಕ್ಕೆ ನೀನೆಲ್ಲಿದ್ದೆ? ಸಿಕ್ಕಿದ್ದೇ ಸಮಯ ಎಂದು ಲಗಾಯಿಸಿಬಿಟ್ಟೆ!"

"ಮಿಠಾಯಿ-ಕಳ್ಳಾ!"

"ನನ್ನ ಹೆಸರು ನೀನು ಹೇಳಿದೆಯೇನು?"

ಸಮೀಪದಲ್ಲಿಯೇ ಬಚ್ಚಲುಕೊಟ್ಟಿಗೆಯ ಹತ್ತಿರ ಯಾರೋ ಕೇಳುವಂತೆ ತೋರಿತು. ನೋಡುವಾಗ, ಅಡುಗೆಯ ಹೆಂಗಸು ದೇವಕಿ, ಕಿಟಿಕಿಯಿಂದ ನಮ್ಮ ಮಾತುಗಳನ್ನೆ ಕದಿಯುತ್ತಾಳೆ. ಕಿಟ್ಟು ಫರಾರಿಯಾದನು. "ಕೋದಂಡಾ, ನಿನಗೆಲ್ಲ ಭವಿಷ್ಯ ಗೊತ್ತಾಗ್ತದೆ. ನೋಡು, ನನ್ನ ಕೈನೋಡಿ ಹೇಳ್ತೀಯಾ?—ನನ್ನ ಮಗ ಈಗ ಏನು ಮಾಡ್ತಾನೆಯೆಂದು?" ಹೀಗೆಂದು ದೇವಕಿ ಕೇಳಿದಳು.

"ನಿನ್ನ ಎಡಗೈ ನೋಡಿದರೆ ನಿನ್ನ ಮಗನ ವಿಚಾರ ತಿಳ್ಯೋದಿಲ್ಲ, ದೇವಕಿ!" ಎಂದೆ.

"ಹಾಗಾದರೆ, ಬಲಗೈ ನೋಡು. ಇನ್ನಾದರೂ ಒಳ್ಳೆ ಬುದ್ಧಿ ತುಂಬಿ ಬಂದಿಖಾನೆಗೆ ಹೋಗಲಾರನಲ್ಲವೆ? ಇದೇ ನನ್ನ ಅವಸ್ಥೆಯೆ?"

"ಎಂದರೆ ಅವನು ಕದಿಯುತ್ತಾನೆಯೆ?"

"ಹೌದು, ಕಳೆದ ವರ್ಷ ಪಟೇಲರಲ್ಲಿ ಒಂದು ಕೊಡ ಕದ್ದಿದ್ದ. ಬಂಗಾರದ ಸರಪಣಿ ಹೋದಾಗ, ಅವನನ್ನು ಹಿಡಿದು ಕಣ್ಣಾನೂರಿಗೆ ಕಳ್ಸಿದರು. 'ಕದಿಯಬೇಡ,' ಎಂದರೆ, 'ನೀನು ಕದಿಯುವುದಿಲ್ಲವೆ?' ಎಂದು ನನಗೆ ಸವಾಲು ಮಾಡುತ್ತಾನೆ."

"ನೀನು ಕದ್ದೆಯಾ! ದೇವಕಿ" ನೀನು, ಹೆಂಗಸು!"

"ನೀನು ಆಗ ಹೇಳಿದಂತೆ, ಹೊಟ್ಟೆಪಾಡಿಗಾಗಿ ಕದಿಯುವುದು. ನಾನು ದುಡಿಯುವಾಗ-ಕದ್ದಾಗಲಿ, ಬೇಡಿಯಾಗಲಿ-ಇವನೇಕೆ ದುಡುಕಬೇಕು? ನೀನೇ ನೋಡು. ಹೌದೋ, ಕೋದಂಡಾ, ನೀನು ನನ್ನ ಹೆಸರು ಹೇಳಿದೆಯಾ? ನಾನು ತೆಗ್ದದ್ದನ್ನು ಅಲ್ಲೇ ಬಿಸಾಡಿದ್ದೇನೆ."

K4237

"ಏನು ತೆಗೆದೆ, ನೀನು?"

"ಒಂದೆರಡು ಸೇರು ತೊಗರಿಬೇಳೆ, ನಾಲ್ಕೈದು ಸೇರು ಉಪ್ಪು, ಸ್ವಲ್ಪ ಹುಣಸೆ,— ಅಷ್ಟೇ. ಅವುಗಳನ್ನು ಅಲ್ಲೇ ಬಿಸಾಡಿದ್ದೇನೆ—ಆಗಲೇ!"

"ಸುರಭೀ ವೈಷ್ಣವೀ ಮಾತಾ ಪ್ರಾಣಿನಾಂ ಹಿತಕಾರಿಣೀ.."

ಪುರೋಹಿತರು ಬರುತ್ತಿದ್ದಾರೆ!

"ಏನು ಮಾಡ್ತಿ, ಕೋದಂಡಾ, ಅಲ್ಲಿ?"

"ಏನಿಲ್ಲ, ದೇವಕಿಯ ಕೈ ನೋಡ್ತೇನೆ!"

"ನಿನ್ನಷ್ಟೆ ಚಮತ್ಕಾರ ಇರಲಿಕ್ಕಿಲ್ಲ ಅವಳ ಕೈಗೆ. ಪಟ್ಟಣದಿಂದ ಬಂದು ಇಂದ್ರಜಾಲ ಮಹೇಂದ್ರಜಾಲ ಮಾಡ್ತೇನೆಂದು ಕೊಚ್ಚಿ, ಚಕ್ಕುಲಿ ಉಂಡೆಗಳನ್ನು ಕದ್ದು ತಿಂದರೆ, ಇಲ್ಲೇನು ಮದ್ದು ಕೊಡಲಿಕ್ಕೆ ಶಾಸ್ತ್ರಿಗಳು ಇದ್ದಾರೆಂದು ಎಣಿಸಿದೆಯಾ? ಇಲ್ಲಿರುವುದು ಕ್ವಿನೀನು........" ಎಂದು ಅಸಂಬದ್ಧವಾಗಿಯೆ ಎಂಬಂತೆ ನುಡಿದರು ಪುರೋಹಿತರು.

ಹಿರಿಯ ಮಾವನು ಬಂದು, "ಪುರೋಹಿತರ ಜ್ಯೋತಿಷ್ಯ, ಹಳ್ಳಿಯ ಜ್ಯೋತಿಷ್ಯ—ಅದು ಸುಳ್ಳಾಗದು!" ಎಂದರು.

ಕಿರಿಯ ಮಾವನು ಬಂದು, "ಕಳ್ಳನ ಪತ್ತೆಯಾಯಿತು, ನಾಳೆ ಡಾಕ್ಟ್ರ-ಜಡ್ಜರ ವಿಚಾರಣೆಯಿರಬಹುದು!" ಎಂದರು.

ಲಿಲ್ಲಿಯು ಬಂದು, ನನ್ನ ಕಿವಿಯಲ್ಲಿ, "ಸುಶಿಯ ಗಂಡನನ್ನು ಕೋಣೆಯೊಳಗೆ ಹಾಕಿದ್ದಾರೆ. ಕಳವು ಪತ್ತೆಮಾಡಿದ್ದಕ್ಕೆ ನಿನಗೆ ಇನಾಮು!" ಎಂದು ನನಗೆ ಬಣ್ಣದ ಬೀಸಣಿಗೆಯೊಂದನ್ನು ಕೊಟ್ಟಳು.

## ೧೧. ಪುಂಡರೀಕನ ಡಬ್ಬಲ್ ಸವಾರಿ

ಪುಂಡರೀಕನೀಗ ಸಾಯ್ಕಲ್ ಸವಾರಿ ಕಲಿತಿದಾನೆ. ಇದರಲ್ಲೇನು ಒಂದು ಮಹಾ ಎಂದು ಕೇಳ ಬೇಡಿರಿ. ಹಾಗೆಂದು ಈ ಪ್ರಶ್ನೆಯನ್ನು ಪುಂಡರೀಕನೊಡನೆಯೂ ಎತ್ತಬೇಡಿರಿ. ಏತಕ್ಕೆಂದರೆ ಈ ಪ್ರಶ್ನೆಗೆ ಸಂಬಂಧಪಟ್ಟ ಒಂದೆರಡು ಸಂಗತಿಗಳನ್ನು ಉತ್ತರಿಸಿ ಉತ್ತರಿಸಿ ಸಾಕಾಗಿ, ಅದನ್ನು ತಪ್ಪಿಸುವುದಕ್ಕೇನೆ ಆತನು ಸಾಯ್ಕಲ್ ಸವಾರಿಯನ್ನು ಕಲಿಯುವಂತಾಯಿತು. "ಏನಾಯ್ತು? ನಿನ್ನನ್ನು ಹಿಡಿದು ಪೋಲಿಸ್ ಲೊಕಪ್ಪಿನಲ್ಲಿ ಹಾಕಿದರಂತಲ್ಲ? ಮತ್ತೇ

ನಾಯ್ತು?" ಎಂಬ ಪ್ರಶ್ನೆ ಪುಂಡರೀಕನಿಗೆ ಕೇಳುವವರ ಸಂಖ್ಯೆ ಹನುಮಂತನ ಬಾಲದಂತೆ ಬೆಳೆದು ಬೆಳೆದು ಬಂದಿತು. ಸಾಯ್ಕಲಿನಲ್ಲಿ ಕೂತು ಬರುವವರೆಲ್ಲ ಪುಂಡರೀಕನ ಅಲ್ಪ ಸ್ವಲ್ಪ ಮುಖ ಪರಿಚಯವಿದ್ದವರೂ ಆತನನ್ನು ಕಂಡೊಡನೆ ಸಾಯ್ಕಲಿನಿಂದ ಇಳಿದು ಈ ಪ್ರಶ್ನೆಯನ್ನು ಪದೇ ಪದೇ ಕೇಳುತ್ತಿರುವುದರಿಂದ, ಸಾಯ್ಕಲ್ ಸವಾರಿ ಕಲಿತು ಸರ್ರನೆ ನಡೆದು ಬಿಡುತಿದ್ದಾನೆ. ಯಾವ ಪ್ರಶ್ನೆಗೂ ಈಗ ಅವಕಾಶವಿರುವುದಿಲ್ಲ. ಆದುದರಿಂದ ಆತನೊಡನೆ ಕೇಳಬೇಕೆಂದಿರುವಿರಾದರೆ, ಸಾಯ್ಕಲ್ ಕಲಿಯಿರಿ, ಅವನೊಡನೆ ಸ್ಪರ್ಧೆಯಿಂದ ಧೀಂಕಿಟ್ಟು ನಡೆಯಿರಿ. ಆಗಲೂ ಕೂಡ ಅವನ ಬೆನ್ನು ಹತ್ತುವುದು ನಿಮಗೆ ಅಸಾಧ್ಯವಾಗಬಹುದು.

ಬಹಳ ಹಿಂದಿನ ಕಾಲದ ಕತೆಯಲ್ಲವಿದು; "ಲಂಡನ್ ವಾಲೊ ಕ್ವಿಟ್ ಇಂಡ್ಯಾ" ಎಂಬ ಆ ಕೂಗು ತೋಪು ಹಾರಿದ ಧುಂಕಾರದಂತೆ ಹೃದಯಕ್ಕೆ ಸಮೀಪವಾಗಿ ರೂಪ ರೇಷೆಯನ್ನು ತಳೆಯುತಿದ್ದ ಕಾಲವದು. ಹಿಂದುಸ್ಥಾನದ ಜನರು ತಮ್ಮ ಜನ್ಮ ಸಿದ್ಧವಾದ ಹಕ್ಕು ಸ್ವಾತಂತ್ರ್ಯಕ್ಕಾಗಿ ಸೊಂಟ ಕಟ್ಟಿ, "ಚಲೋ ಧಿಲ್ಲಿ,ಲಂಡನ್ ವಾಲೋ ಕ್ವಿಟ್ ಇಂಡ್ಯಾ, ಇಂಕ್ವಿಲಾಬ್ ಜಿಂದಾ ಬಾದ್" ಎಂದು ಹೃದಯವನ್ನು ಪೋಲೀಸರ ದಬ್ಬಾಳಿಕೆಗೆ ವಿರೋಧವಾಗಿ ಕೊಟ್ಟು, ಬೆನ್ನನ್ನು ಧೈರ್ಯ ಸ್ಥೈರ್ಯಗಳ ಗೋಡೆಗಳಿಗೆ ಬಲಕನ್ನಾಗಿ ಕೊಟ್ಟು ನಿಂತ ದಿವಸಗಳವು. ಆ ಅಗೋಸ್ತು ತಿಂಗಳ ದಿನಗಳಲ್ಲಿ ಯಾವ ಅರಾಜಕತೆ, ಯಾವ ಪುಂಡಾಟಿಕೆ ನಡೆದು ಹೋಯಿತೊ ಆ ದಿನಗಳೆಲ್ಲವೂ ಇಂದಿನ ದಿವಸ ಕಪ್ಪು ದಿನಗಳಾಗಿ ಲಿಖಿತವಾಗಿರುವವಷ್ಟೆ? ಆ ಅರಾಜಕತೆಯೊಡನೆ, ಆ ಪುಂಡಾಟಿಕೆಯೊಡನೆ ಉರುಳುತ್ತಿರುವ ತಂತಿ ಕಂಬಗಳು, ಕಳಚಲ್ಪಡುವ ರೈಲ್ವೆ ಕಂಬಿಗಳು ಯಾವ ಹಿಂದೂ ಮಾತೆಯ ಬಂಧನವನ್ನು ಸಡಿಲಿಸುತಿದ್ದವೊ, ಆ ಹಿಂದೂ ಮಾತೆಯ ಬಂಧನವನ್ನು ಬಿಗಿಯಲು, ದೃಢಗೊಳಿಸಲು ದಬ್ಬಾಳಿಕೆಯ ಸ್ವಾರ್ಥರೂಪಿ ರಾಕ್ಷಸನು ಸರ್ಕಾರದ ಅತ್ಯುಚ್ಚ ನೌಕರ ಶಾಹಿಯನ್ನು ಹಿಡಿದು ಹಳ್ಳಿಯ ಪಟೇಲನವರೆಗೆ ಎಲ್ಲವರನ್ನು ತನ್ನ ಸಹಸ್ರಾರು ಕಿಸೆಗಳಲ್ಲಿ ತುಂಬಿಸಿ ತುಂಬಿಸಿ ಕಳ್ಳಹೆಜ್ಜೆಯಿಂದ ಹಗಲೂ, ಮಹತೋಭಾರ ಹೆಜ್ಜೆಯಿಂದ ಇರುಳೂ ತಾನೇ ತಾನಾಗಿ ಮೆರೆಯುವಾಗ ಜನವೆಲ್ಲ ನಿರ್ವೀರ್ಯರಾಗಿರುವುದೆಂದು ಕೋದಂಡನಂತಹವರು ಭಯಪಡುವಷ್ಟು ಭೀಕರವ ದಿವಸಗಳಾಗಿದ್ದುವಷ್ಟೆ—ಅವು?

ಬೂದಿಯ ಕೆಂಡವಿದು,—ತಿರಿಗೊಮ್ಮೆ ಗಾಳಿಗೆ—ಜೀವಿತದ ಉಸಿರಿಗೆ ಭುಗ್ಗೆನ್ನುವದೆಂದು ಪುಂಡರೀಕಸಂತಹವರು ತಿಳಿದಿದ್ದ ದಿವಸಗಳಾಗಿದ್ದವಷ್ಟೆ?

"ಏನೆಂದು ಉಗ್ರಾಣಿ ದೇವರ ಕಟ್ಟೆಯ ಮೇಲೆ ಕೂತು ಕೊಂಡೆ," ಎಂದು ಹಳ್ಳಿಯ ರೈತನನ್ನು, ಅಶ್ವತ್ಥ ಮರದ ಕಟ್ಟೆಯ ಮೇಲೆ ಕೂತ ರೈತನನ್ನು—ಉಗ್ರಾಣಿಯು ಹೆದರಿಸಬೇಕಾದರೆ, ಆ ಹೆದರಿಕೆಗೆ ಶ್ರೀಮುತ್ತು ತೀರ್ವೆ ಕೊಡುವ ರೈತನು ಬೆಕ್ಕಸ ಬೆರಗಾಗಬೇಕಾದರೆ, ಆ ರೈತನೂ ಕಳ್ಳ ಸಂತೆಯಲ್ಲಿ ಅಕ್ಕಿ ಮಾರಿ ಮಾನವನ್ನೂ ಗೌರವವನ್ನೂ ಹಿಸುಕಿ ಹಿಂಡಿ ಅವುಗಳ ಬಾಯೊಳಗೆ ವಸ್ತ್ರದ ಮುದ್ದೆಯನ್ನು ತುರುಕಿ ಅವುಗಳೆರಡನ್ನೂ ತನ್ನ ಕಿಸೆಯಲ್ಲಿ ಮಡಗಿಟ್ಟುಕೊಂಡಿರಬೇಕಲ್ಲವೆ? ಅಹುದು, ಇಲ್ಲದಿದ್ದರೆ, ಕಲೆಕ್ಟರ್ ಆಫೀಸಿನಲ್ಲಿ ಸಾಕ್ಷ್ಯ ಹೇಳುವಾಗ, ಕಲೆಕ್ಟರರು ತಲೆಕೆಳಗಿಟ್ಟು ಏನೋ ಗೀಚುವಾಗ, ಜನಿವಾರಕ್ಕಿದ್ದ ಬೀಗದ ಕೈಯ ತೂತಿನಲ್ಲಿ ತುಂಬಿಸಿಟ್ಟ ನಶ್ಯದ ಹುಡಿಯನ್ನು ಮೂಗಿಗೆ ಏರಿಸಿ ಎಲ್ಲರು ನಗುವಂತೆಯೂ, ಕಲೆಕ್ಟರರು ಆಶ್ಚರ್ಯಪಡುವಂತೆಯೂ ಮಾಡಿದ ರೈತಾ—ಅಶ್ವತ್ಥ ಕಟ್ಟೆಯ ಮೇಲೆ ಕೂತ ಪ್ರಾಣಿ—ಕೆಳಗಿಳಿದು ಉಗ್ರಾಣಿಯನ್ನು ಮೇಲಕ್ಕೇರಿಸಿ, ಆತನಿಗೊಂದು ಬೀಡಿಯ ಬೆಂಕಿ ಕೊಟ್ಟು, ಚಕಿತನಾಗಿ ಹೋಗಬೇಕಾಯಿತಲ್ಲ?

ಪಟ್ಟಣದ ಚಿಕ್ಕ ಸಾಹುಕಾರ—ನಾಲ್ಕು ಗಂಟೆಯಷ್ಟು ಕಾಲ ಸುಭಾಷ ಬೋಸನು ಮೇಲೋ ಜವಾಹಿರಲಾಲನು ಮೇಲೋ ಎಂದು ತರ್ಕ ವಿತರ್ಕ ಮಾಡಬಲ್ಲ ಪಟ್ಟಣದ ಸಾಹುಕಾರ—ನೀವಾತನನ್ನು ಕಂಡಿರಬಹುದು, ಮೂರು ಮಾರ್ಗಗಳು ಸಿಕ್ಕುವಲ್ಲಿ ಬೀಡಾ ಬೀಡಿಯಂಗಡಿಯನ್ನು ಇಟ್ಟವನು, ರಾತ್ರಿ ಹನ್ನೆರಡರ ತನಕ ನಾಲ್ಕು ಆರು, ಸೊನ್ನೆ ಒಂದು, ಏಳು ಒಂಬತ್ತು ಎಂದು ಜಪಿಸುತ್ತಿರುವವನು, ಪೋಲೀಸ್ ಜವಾನನ ಬೂಟ್ಸಿನ ಶಬ್ದವನ್ನು ಕೇಳುತ್ತಲೆ ಸಮೀಪದ ದೊಡ್ಡ ಚರಂಡಿಯಲ್ಲಿ ಅಣಗುವುದಾದರೆ, ಶೂರಾಶ್ಚ ಕೃತ ವಿದ್ಯಾಶ್ಚ ಮಮ ಪುತ್ರಾ ವನಂಗತಾಃ ಎನ್ನುವಷ್ಟು ಶೋಚನೀಯವಾದ ಅವಸ್ಥೆಗೆ ಕಾಲ ಪುರುಷನು ಇಳಿದು ಬಂದಿರಬೇಕಲ್ಲವೆ? ಇಲ್ಲದಿದ್ದರೆ, ರಾತ್ರಿ ಹನ್ನೊಂದು ಗಂಟೆಗೆ ತಂವೆ ಮಕ್ಕಳಿಬ್ಬರನ್ನು—ಓಪನ್ ಕ್ಲೋಜಿಂಗ್ ಎಂದು ವ್ಯವಹರಿಸುತ್ತಿರುವವರನ್ನು—ಹಿಡಿದು ಗದರಿಸಿ ಸ್ಟೇಶನಿಗೆ ಬರಬೇಕೆಂದು ಪೋಲಿಸ್ ಜವಾನನು ಎಳೆದು ಗಲ್ಲಿಯಿಂದ ಗಲ್ಲಿಗೆ ಕೊಂಡು ಹೋಗಿ ಕಡೆಗೆ ಸ್ಟೇಶನಿನ ಬಾಗಲಲ್ಲಿ ಎಂಟಾಣೆಯ ಲಂಚವನ್ನು ಕಿಸೆಯಲ್ಲಿ ನೂಕಿ ಅವರಿಬ್ಬರನ್ನೂ ಬಿಡಬೇಕೆ? ಕಲೆಕ್ಟರ್ ಸಾಹೇಬರನ್ನು ಕಂಡು ಹೆದರದ ಜನಾಂಗದ ಮಕ್ಕಳಿವರು ಪೋಲಿಸ್ ಜವಾನನಿಗೆ

ನಿಷ್ಕಾರಣವಾಗಿ, ಉಗ್ರಾಣಿ ದೇವರಿಗೆ ಅನ್ಯಾಯವಾಗಿ ಸಲಾಮು ಹೊಡೆಯಬೇಕಾದರೆ, ಯಾವ ದೌರ್ಬಲ್ಯ ಜನರಲ್ಲಿ ಅಡರಿಸಿ ಬಂದಿರಬೇಕು? ಯಾವ ತರದ ಅನ್ಯಾಯ ಮುಂಚೆ ನಡೆದು ಹೋಗಿರಬೇಕು?

ಅಗೋಸ್ತು ಒಂಬತ್ತನೆ ದಿವಸದ ದಬ್ಬಾಳಿಕೆಯ ದಿನ ಪೋಲೀಸರು ಲಾರಿಗಳಲ್ಲಿ ತುಂಬಿ ರಥ ಬೀದಿಯ ಮೂಡಲಿಂದ ಪಡುವಲಿಗೆ ಆ ಲಾರಿಗಳನ್ನು ಲೆಕ್ಕ ಮಾಡಿದ ಹಾಗೆ ನೂರೆಂಟು ಸಲ ಓಡಾಡಿಸಿ ಪೆಟ್ರೋಲನ್ನು ನೀರು ಮಾಡಿ, ಆ ನೀರನ್ನು ಆವಿ ಮಾಡಿ, ಆ ಆವಿಯಿಂದ ಮುಂದೆ ಮಳೆ ಸುರಿಸುವ ಆಲೋಚನೆ ಮಾಡಿದ ಪೋಲೀಸು ಜವಾನರು ಬಾಯಾರಿಕೆಯನ್ನು ಇಳಿಸುವುದಕ್ಕಾಗಿ, ಕೋವಿ ಹಿಡಿದು ಕೋಮಲ ವಿಲಾಸವನ್ನು ಹತ್ತಿ, ತಿಂಡಿ ತೀರ್ಥ ಸಿಕ್ಕಿಲ್ಲವೆಂದು ಕುರ್ಚಿ ಮೇಜುಗಳನ್ನು ಪುಡಿ ಮಾಡಿ, ವಿಲಾಸವನ್ನೆಲ್ಲ ಸುತ್ತಿ, ಎದುರಿನಲ್ಲಿ ಗೋಡೆಗಳಿಗೆ ತೂಗ ಹಾಕಿದ ಕನ್ನಡಿಗಳಲ್ಲಿ ಕೋವಿ ಹಿಡಿದು ನಿಂತ ಪೋಲೀಸ್ ಜವಾನರನ್ನು ಕಂಡು, ತಮಗೆದುರು ಪೋಲಿಸರೆಂದು ಭ್ರಮಿಸಿ—ಕೋವಿಯಿಂದ ಕನ್ನಡಿಗಳನ್ನು ಕುಕ್ಕಿ ಪುಡಿ ಪುಡಿ ಮಾಡಿ ಕಡೆಗೆ ಪಲಾಯನ ಗೈದು ಹೋಗ ಬೇಕಾದರೆ, ಯಾವ ತರದ ಕಾಯಿದೆ ಬಾಹಿರ್ ಸರಕಾರದ ದಬ್ಬಾಳಿಕೆ ಊರಲ್ಲಿದ್ದಿರಬೇಕು? ಅಂತಹ ದಿವಸಗಳ ಕತೆಯಿದು.

ಊರಿನ ಚಿಕ್ಕ ದೇವಳವೊಂದು ರಥ ಬೀದಿಯಿಂದ ಬಾವಟೆ ಗುಡ್ಡೆಗೆ ಹೋಗುವಲ್ಲಿ ಇದೆಯಲ್ಲವೆ? ಆ ದೇವಳವು ಹಿಂದೆ ಒಬ್ಬ ಸನ್ಯಾಸಿಯದಾಗಿತ್ತು. ಸಮಾಧಿಯಾಗುವ ಮುಂಚೆ ದೇವಳವನ್ನು ಹತ್ತು ಸಮಸ್ತರಿಗೊಪ್ಪಿಸಿ ಪ್ರತಿ ವರ್ಷವೂ ಸಪ್ತಾಹ ಭಜನೆಯ ಒಂದು ಏರ್ಪಾಟು ಮಾಡಿದ್ದನು. ಆ ವರ್ಷದ ಸಪ್ತಾಹ ಭಜನೆ ಅಗೋಸ್ತು ಅತ್ಯಾಚಾರದ ಅನಂತರ ಬಂದಿದ್ದು, ಭಜನೆಗೆಂದು ಚಪ್ಪರ ವಗೈರೆ ತಯಾರಿಸುತ್ತಿದ್ದಾಗ, ವ್ಯವಸ್ಥಾಪಕರು, ರಾಮಯ್ಯ ನಾಯ್ಕರು, ಚಾವಡಿಯ ಒಂದು ಮೂಲೆ ಬದಿಯಲ್ಲಿ ಕೂತು ಚೀಲದಿಂದ ಬೀಡಿಯ ಮೇಲೆ ಬೀಡಿ—ತೆಗೆದು, ಅಣಿಲ್ ಬೆಂಕಿ ಪೆಟ್ಟಿಗೆಯ ಕಡ್ಡಿಯನ್ನು ಮೇಲಿಂದ ಮೇಲೆ ಗೀಚಿ ಬೆಂಕಿ ಮಾಡುತ್ತ, ಸಂಕೋಲೆ ಬೀಡಿಯೆಳೆಯುವುದೆನ್ನುತ್ತಾರಲ್ಲ—ಹಾಗೆ ಮಾಡುವವರು, ಅಲ್ಲಿಯೆ ದೇವಳದ ಎದುರಿನಲ್ಲಿ ಒಬ್ಬ ಕೆಂಪು ಟೊಪ್ಪಿ ಪೋಲಿಸ್ ಜವಾನನು ಆ ಕಡೆ ಈ ಕಡೆ ಹೋದುದನ್ನು ನೋಡಿದರು. ನೋಡಿದವರಿಗೊಮ್ಮೆ ಏನೋ ಅಪಶಕುನವುಂಟಾಯಿತು. ಮತ್ತೆ ಆ ಜವಾನನು ದೇವಳವನ್ನು ಹೊಕ್ಕು, "ರಾಮಯ್ಯ

ನಾಯ್ಕರೆಂದರೆ ತಾವೇನು," ಎಂದು ಕೇಳಿ, ಬಂದ ಹಾಗೆ ಹೋದನಂತೆ. ಕೇಳಿದ ಪ್ರಶ್ನೆಗೆ ಉತ್ತರ ಗ್ರಹಣವೆಂಬುದೂ ಇಲ್ಲವೆ, ಎಂದು ನಾಯ್ಕರು ವಿಮರ್ಶಿಸುತಿದ್ದಾಗ ಕೆಂಪು ಟೊಪ್ಪಿ ಸರಕ್ಕನೆ ನಡೆದು ಮಾಯವಾದುದೂ ಕಂಡು ಬಂದಿತು. ಕಟ್ಟಿದ ಚಪ್ಪರ ಕೆಳಗಿಳಿಸಲ್ಪಟ್ಟಿತು. ಕುಂಬಾರಗೆ ವರುಷ, ದೊಣ್ಣೆಗೆ ನಿಮಿಷವೆನ್ನುತ್ತಾರಲ್ಲ? ವ್ಯವಸ್ಥಾಪಕರು ರಾಮಯ್ಯ ನಾಯ್ಕರು ಸೀದಾ ಮನೆಗೆ ಹೋಗಿ ನಾಲ್ಕು ಕುಡುತೆ ತಣ್ಣೀರು ಕೂಜೆಯಿಂದ ಕುಡಿದು, "ಅಯ್ಯಬ್ಬಾ" ಎನ್ನುತ್ತ ಹೊರನಡೆದು, ಏಳುಗಂಟೆಯ ಒಳಗೆ ಬರುತ್ತೇನೆಂದು ಹೆಂಡತಿಯೊಡನೆ ತಿಳಿಸಿ ತಿರುಗಾಟಕ್ಕೆ ಹೋದರಂತೆ.

ಸಪ್ತಾಹ ಭಜನೆ ರದ್ದಾಗಿತ್ತು.
ಉಡಿದಾರವಿಲ್ಲದೆ ಕೋಮಣ ಹೋಗಿತ್ತು.

ಆದರೆ ಇದರ ಸಂಗತಿಯೆಲ್ಲ ಗೊತ್ತಾದೊಡನೆ ಭಜಕರು ಸೊಂಟಕಟ್ಟಿದರು. ಕಿಸೆ ತುಂಬಾ ರೂಪಾಯಿ ತುಂಬಿಸಿ ಕಲೆಕ್ಟರ್ ಸಾಹೇಬರನ್ನು ಕಂಡು, ಅಗತ್ಯವಿದ್ದಲ್ಲಿ ಸಲಹೆಗಾರರಿಗೆಂದು ತಂತಿಯ ಖಾಲಿ ಪತ್ರವನ್ನು ಕೈಯಲ್ಲಿ ಹಿಡಿದು, ಆ ಆಫೀಸು ಈ ಆಫೀಸು ತಿರುಗಾಡಿ ಕಿಸೆಯನ್ನು ಬರಿದು ಮಾಡಿ, ತಂತಿಯ ಪತ್ರದ ಒದಿಯಲ್ಲಿ ಏನೇನೋ ಲೆಕ್ಕ ಗೀಚಿ ಅದನ್ನು ಮತ್ತೆ ಚೂರು ಮಾಡಿ–ಮುಂದಿನ ತಿಂಗಳ ಅದೇ ದಿವಸ ಭಜನೆ ಜರಗಿಸುವುದೆಂದು ಸಿದ್ಧಾಂತ ಮಾಡಿದರು. ಆದರೆ, ಬಂದ ಪೋಲೀಸ್ ಜವಾನನ–ರಾಮಯ್ಯ ನಾಯ್ಕರ ನಾಮೋಚ್ಚಾರ ಮಾಡಿದ ಜವಾನನ ಟೊಪ್ಪಿ ನಂಬ್ರ ಗೊತ್ತಾಗದೆ, ಒಂದು ಒಳ್ಳೆಯ ದಿನ ಸಾಯಲಿಯೆಂದು ಆತನಿಗೆ ವರ ಪ್ರಸಾದ ಕೊಟ್ಟು ಎಲ್ಲವರೂ ಸ್ವಸ್ಥರಾದರು.

ಮುಂದುವರಿಸಿದ ಸಪ್ತಾಹ ಭಜನೆಯ ಕಡೆ ದಿನ ಪುಂಡರೀಕನು ರಾತ್ರೆ ಒಂಬತ್ತು ಗಂಟೆಗೆ ಸಪ್ತಾಹಕ್ಕೆ ನಡೆದನು. ಹತ್ತು ನಿಮಿಷದಷ್ಟು ಮಾರ್ಗವನ್ನು ನಡೆದು ಹೋದನು. ಆಕಾಶದ ಮೂಡಣದಲ್ಲಿ ಮಿಂಚು ಹೊಳೆದು ಗುಡುಗಿದೊಡನೆ ಆ ಆಕಾಶವೆಲ್ಲ ನೀಲವಾದ ಕಪ್ಪು ಮೋಡಗಳಿಂದ ನಿಬಿಡವಾದುದನ್ನು ಕಂಡು ತಿರಿಗಿ ಹಿಂದಕ್ಕೆ ಮನೆಗೆಂದು ಹೊರಟನು. ಮಳೆ ಬರುವ ಚಿಹ್ನೆಗಳು ಕಾಣುವಾಗ ಕೊಡೆಯಿಲ್ಲದೆ ದೇವಳಕ್ಕೆ ಹೋದರೆ, ಮಳೆ ಬಂದು ಮಳೆ ಮುಗಿಯುವ ತನಕ ಪುಂಡರೀಕನು ಸಿಕ್ಕಿ ಬಿದ್ದರೆ, ಮತ್ತೆ ತರಗತಿಯಲ್ಲಿ ಪಾಠ ಮಾಡುವುದರ ಒಟ್ಟಿಗೆ ನಿದ್ದೆಯಾಂತು ಕನಸು ಕಂಡು ಆ ಕನಸಿನಲ್ಲಿ "ಹಾಗೆ ಆಗಲಿಕ್ಕೇ ಆಗದು!" ಎಂದು ಹೆಂಡತಿಯೊಡನೆಯೋ, ಸಹೋ

ಪ್ರೊಫೆಸರನ್ನೊಂದಿಗೆಯೋ, ಮತ್ತಾರೊಡನೆಯೋ ಜಗಳವಾಡಿ-ಕೇಳಿದ ಶಬ್ದಕ್ಕೆ ಕನಸೊಡೆದು ನನಸೊಂದಿ—"ಏ ಹುಡುಗಾ, ನಾಕು ಮಾಡೋ—ಮತ್ತೆ" ಎಂದು ಕಣ್ಣನ್ನು ಉಜ್ಜಿಣ ಗೊಳಿಸುವ ಬದಲು--ಕೊಡೆ ಹಿಡಿದುಕೊಂಡು ದೇವಳದ ಸುತ್ತೊಂದು ಬಂದು, ಅಲ್ಲಿ ಯಾರನ್ನೂ ಕಾಣದೆ—ತರಗತಿಯ ವಿದ್ಯಾರ್ಥಿಯೊಬ್ಬನನ್ನು ಕಂಡು ಮುಗುಳ್ನಕ್ಕು, ಸಹೋದ್ಯೋಗಿಯೊಬ್ಬನನ್ನು ಸಂಧಿಸಿ—ಹೆ! ಈ ವರ್ಷ ಹೇನು ಜನವಿಲ್ಲ---ಎಂದು ಉದ್ಗಾರ ತೆಗೆದು—ಮನೆಗೆ ಹೋಗುತ್ತೇನೆಂದು ನಡೆದು-ಬಾಪಟಿ ಗುಡ್ಡೆಯ ಚಂದ್ರಿಕಾ ವಿಹಾರಕ್ಕೆ ಮನಸೋತು ಅಲ್ಲಿ ನೆಟ್ಟಗೆ ಹೋಗಿ ಅಲ್ಲಿ ಸುಮ್ಮನೆ ಶೂನ್ಯನಾಗಿ—ಮತ್ತೆ ಅಲ್ಲಿಂದಲೇ ಕಾಣುವ ಜೋಡುಗುಡ್ಡೆಯ ನೆರಳಿಗೆ ಹಾರಿ ನೆಗೆದು ಅಲ್ಲಿ ಕೆಲ ಹೊತ್ತು ವಿಶ್ರಮಿಸಿ ಬರುವುದೆಂದು ಹಿಂದಕ್ಕೆ ಮನೆಗೆಂದು ಹೊರಟನು.

ಕತ್ತಲೆಯಾಗಿತ್ತು. ಸೂಚಿ ಭೇದ್ಯವಾದ ಕತ್ತಲೆಯೆಂದು ಕಾಳಿದಾಸನು ಹೇಳಿದುದರ ನೆನಪಿದೆಯೆ? ಪೋಲಿಸ್ ಜವಾನ ಭೇದ್ಯ ಕತ್ತಲೆಯೆಂದರೆ ಅದೊಂದು ಅಲಂಕಾರದ ಮಾತಾಗದೆಂದು ದ್ವಾವಿಂಶರು ಹೇಳಿದರೂ, ಪುಂಡರೀಕನ ಅಭಿಪ್ರಾಯದಲ್ಲಿ ಕಾಳಿದಾಸನಿಗೂ ಆ ಪ್ರಯೋಗದ ಅರ್ಥವಾಗದೆಂದು ಇದ್ದರೂ—ಅಂತಹ ಕತ್ತಲೆಯಲ್ಲಿ ಹುಣ್ಣಿಮೆಯ ಎದುರು ದಿನದಲ್ಲಿ ಮೋಡದ ಮಾಯಾ ಜಾಲದಿಂದ ತೋರುವ ಕತ್ತಲೆಯಲ್ಲಿ ಪುಂಡರೀಕನು ಒಬ್ಬಂಟಿಗನಾಗಿ ನಡೆದು ಹೋಗುವುದು ಅವನ ಭಾಗ್ಯದಲ್ಲಿ ಬರೆದಿತ್ತು. ಆ ವಿಧಿ ಲಿಖಿತವನ್ನು ಅಳಿಸಲಾಗುವುದೆ? ಹಿಂದಕ್ಕೆ ಬರುವಾಗ ಯಾರೋ ಮಾತಾಡುತ್ತ ನಿಂತುದು ಕೇಳಿ ಬಂತು.

"ಬಿಡಿ, ಸ್ವಾಮಿ! ನಾನು ಸಾಯ್ಕಲ್ ಲೀಡ್ ಮಾಡಿ ಬಂದುದು, ದೀಪವಿಲ್ಲದೆ ಈ ಕತ್ತಲೆಗೆ ಸಾಯ್ಕಲ್ ನಡೆಸುವುದು ಹೇಗೆ?"

"ಬಿಡುತ್ತೇನೆ. ಸ್ಟೇಶನಿಗೆ ನಡೆ," ಎಂದು ಜವಾಬುದಾರೀ ಮಾತು ಕೇಳಿಸಿತು.

ಪುಂಡರೀಕನು ಮುಂದೊತ್ತಿ ಬಂದನು. ನಿಂತಾಗುವ ಸಂಭಾಷಣೆ ನಡೆದು ಬಂದಂತೆಯೂ ತೋರಿತು. ಪುಂಡರೀಕನ ಬೆನ್ನಿನ ಹಿಂದಕ್ಕೂ ಬರುವಂತಾಯಿತು.

ನಡೆಯುತಿದ್ದ ಸಂಭಾಷಣೆ ಪುಂಡರೀಕನನ್ನು ದಾಟಿಯೂ ಹೋಯಿತು ಪುಂಡರೀಕನು ಕುತೂಹಲಿಯಾಗಿ ಉದ್ದುದ್ದದ ಹೆಜ್ಜೆ ತೆಗೆದು ಅಲ್ಲಿಯೇ

ಮನೆಯಿಂದ ತೋರುವ ದೀಪದ ಕಿರಣಕ್ಕೆ ಸಾಯ್ಕಲ್ ಹಿಡಿದು ಮುಂದಕ್ಕೆ ಹೋಗುವ ಬೆಳ್ಳಗಿನ ಹುಡುಗನನ್ನೂ ಅವನ ಇಬ್ಬದಿಗಳಲ್ಲಿ ಪೋಲಿಸ್ ಜವಾನರನ್ನೂ ಕಂಡನು.

ಪುಂಡರೀಕನ ದಿಟ್ಟಿಯೂ ಹುಡುಗನ ದಿಟ್ಟಿಯೂ ಕೂಡಿದುವು! "ನೋಡಿ,ಸಾರ್, ಸುಮ್ಮನೆ ಹಿಡಿದಿದ್ದಾರೆ. ಸಾಯ್ಕಲ್ ಲೀಡ್ ಮಾಡ್ತಿದ್ದೆ."

"ಅದಕ್ಕೆ?"

"ಹಿಡಿದು ಸ್ಟೇಶನಿಗೆ ಒಯ್ಯುತ್ತಾರೆ."

"ಒಯ್ದು ಬಿಡಲಿ, ಅಲ್ಲಿ ಸಬ್ ಇನ್ಸ್ಪೆಕ್ಟ್ರ ಇರುತ್ತಾರೆ. ಅವರಿಗೆ ದೂರು ಕೊಡು. ಬಿಟ್ಟ್ಬಿಟ್ತಾರು. ನೀನು ಮಾತ್ರ ಇವರೊಡನೆ ನಡೆದು ಬಿಡು."

"ಹೆದರಿಕೆಯಾಗುತ್ತದೆ, ಸಾರ್," ಹುಡುಗನೆಂದ.

"ಹಾಗಾದರೆ, ನಾನೂ ಬಂದೆ," ಎಂದು ಮೂವರೊಡನೆ ನಾಲ್ಕನೆಯವನಾದ ಪುಂಡರೀಕ.

"ನನ್ನ ಪರಿಚಯುವಿದೆಯೆ?" ಎಂದ ಪುಂಡರೀಕ.

"ಪರಿಚಯುವಿಲ್ಲದೆ ಏನು, ಸಾರ್" ಎಂದು ಪೋಲೀಸರ ವಶದ ಕೈದಿಯೆಂದ.

ಶಾಲೆಯ ಹುಡುಗನನ್ನು ಭಯದಿಂದ ತಪ್ಪಿಸದ ಉಪಾಧ್ಯಾಯನು ಉಪಾಧ್ಯಾಯನೆ ಎಂದು ಪುಂಡರೀಕನು ಮುಂದೊತ್ತಿದನು ಹುಡುಗನ ಸಹಾಯಕ್ಕೆ ಬಂದ ಉಪಾಧ್ಯಾಯನು ಎಷ್ಟು ಹೊತ್ತು ಹಿಂಬಾಲಿಸಿಯಾನು ಎಂದು ಪೋಲಿಸ್ ಪಾರ್ಟಿ ನಡೆಯಿತು. ಹೆಂಡದ ವಾಸನೆಗೆ ಮೂಗಿನ ತುದಿಯನ್ನು ಉಜ್ಜಿಕೊಳ್ಳುವ ಕೈದಿ ಮುಂದರಿದನು.

ನಡೆಯುವ ಪಾರ್ಟಿ ಮಾತ್ರ ಅಲ್ಲಲ್ಲಿ ಕುಂಟುತಿತ್ತು. ಕೈದಿಯನ್ನು ಬೇರೆ ಕೊಂಡು ಹೋಗಿ ಏನೋ ಮಾತಾಡುತಿತ್ತು. "ಏ, ನಡೆಯಿರಿ ಸ್ಟೇಶನಿಗೆ, ಹೊತ್ತಾಗುತ್ತದೆ," ಎಂದು ಪುಂಡರೀಕನು ಉಸಿರೆಳೆವೊಡನೆ ಗಾಳಿಗೋ ಎಂಬಂತೆ ಆ ಪಾರ್ಟಿ ಬೀಸುತಿತ್ತು. ಮತ್ತೆ ತಿರಿಗಿ ಮಾರ್ಗದ ಬದಿಯ ಚರಂಡಿಯ ಚಿಕ್ಕ ಗೋಡೆಯ ಮೇಲೆ ಕೂತು ಬೀಡಿಯೆಳೆಯುತಿತ್ತು.

ಬೀಡಿಯೆಳೆಯುತ್ತ ಒಂದು ಸವಾಲು ಬಂತು!

ಸವಾಲು ಬಂದುದು ಹುಲಿಯ ಮೇಲೆ ನಿಂತು!

"ಏನಯ್ಯಾ ನೀವು? ನಿಮ್ಮ ಕೆಲ್ಸ ಹಿಡಿಯ್ರಿ, ಯಾಕೆ ಬರುತ್ತೀರಿ?"

"ಯಾಕೆ ಬರುತ್ತೀರಿ, ಎಂದರೆ, ಹುಡುಗನ ಪ್ರಾಯ ನೋಡಿ, ರಾತ್ರಿಯ ಗಂಟೆ ನೋಡಿ—ಮಾತಾಡುವ ನಿಮ್ಮ ಜುಲುಮು ನೋಡಿ."

"ಜುಲುಮು ನೋಡುವುದೆಂದರೆ—ಈ ನನ್ನ ಕೈಯಲ್ಲಿ ಬೇಡಿಯಿದೆ; ಕಬ್ಬಿಣದ ಬೇಡಿ ಚೀಲದಲ್ಲಿದೆ."

"ಓಹೋ ಹಾಗೇನು ಊರೆಲ್ಲ ಉರುಟಾಯಿತೆ?"

"ಊರು ಉರುಟೋ, ತಲೆ ಮುಂಡೆಯುರುಟೋ-ತೋರಿಸಬೇಕೆ?" ಎಂದಿತು ಜವಾನನ ಜುಲುಮು.

"ತೋರಿಸಬಹುದು, ಆದರೆ ಮಾತ್ರ ಆಲೋಚನೆ ಮಾಡುವಾಗ, ತಲೆಯುರಟನ್ನು ಕೊರಳಿನ ಮೇಲೆಯೇ ಇಟ್ಟುಕೋ, ಕಂಕುಳಲ್ಲಿಟ್ಟುಕೊಳ್ಳ ಬೇಡ."

"ಶಾಲೆಯ ಮಾಸ್ಟ್ರೋ ನೀನು? ಯಾವ ಶಾಲೆಯ ಮಾಸ್ಟ್ರು?"

"ಯಾವ ಶಾಲೆಯಾದರೆ ನಿನಗೇನು ಬಂತು?"

"ಏನಯ್ಯ ಮಾಸ್ಟ್ರೆ? ಪೋಲಿಸರಿಗೆ ಏಕೆ ಅಡ್ಡ ಬರುತ್ತಿ? ಪೋಲಿಸರಿಗೆ ಅಡ್ಡ ಬಂದರೆ ತಕ್ಷೀರು ಗೊತ್ತೆ?"

"ಮಾತು ಮತ್ತೆ! ನಡೆ ಸ್ಟೇಶನಿಗೆ" ಎಂದು ಹೇಳಿದುದು ಪುಂಡರೀಕನ ಶ್ರೀಮದ್ಗಾಂಭೀರ್ಯದ ಅಲ್ಪ ಪ್ರಾಣದ ಜುಲುಮು.

"ಸಾರ್, ಎಂಟಾಣೆ ಕೇಳುತ್ತಾರೆ," ಕೈದಿಯೆಂದ.

"ಕೊಡಲಾರೆಯೆನ್ನು."

"ಹೊಡೆಯುತ್ತಾರೆಂದು ಗದರಿಸುತ್ತಾರೆ."

"ಹೊಡೆಯೆನ್ನು."

"ಲೋಕಪ್ಪಿನಲ್ಲಿ ನೂಕುತ್ತಾರೆ ಯೆನ್ನುತ್ತಾರೆ."

"ನಾನು ಸಾಕ್ಷಿ."

ಮತ್ತೆ ಐದು ನಿಮಿಷದಲ್ಲಿ ನಾವು ಸ್ಟೇಶನ್ ಮುಟ್ಟಿದೆವು. ಗಡಿಯಾರ ವನ್ನು ನೋಡುವಾಗ ಹನ್ನೆರಡು ಗಂಟೆ ರಾತ್ರಿ! "ಚಂಡೀಮಗ—ರಥಬೀದಿ ಯಿಂದ ಸ್ಟೇಶನಿಗೆ ಹದಿನೈದು ನಿಮಿಷದ ಹಾದಿಗೆ—ಎರಡು ಗಂಟೆ ತೆಗೆದೆ ಯಲ್ಲ," ಎಂದು ಮರುಗಿದನು ಪುಂಡರೀಕನು.

ಸ್ಟೇಶನಿನಲ್ಲಿ ಹುಡುಗನಿಗೂ ಪೋಲಿಸರಿಗೂ ಒಂದು ಬದಿಯಲ್ಲಿ ಮಾತು

ಕತೆಯುಂಟಾಯಿತು. ಅದರಲ್ಲಿ ಪುಂಡರೀಕನು ಮೂಗು ಸೇರಿಸಿಕೊಳ್ಳು ವಾಗ "ನಿಮಗಿಲ್ಲಿ ಕೆಲ್ಸವಿಲ್ಲ. ನಡೆಯಿರಿ ಅತ್ತ!" ಎಂದು ಅಪ್ಪಣೆ ಬಂತು.

"ನಾನು ನಡಿಯುತ್ತೇನೆ. ಸಬ್ ಇನ್ಸ್ಪೆಕ್ಟ್ರು ಎಲ್ಲಿ?'' ಎಂದು ಕೇಳಿದ ಪುಂಡರೀಕ.

"ಸಬ್ ಇನ್ಸ್ಪೆಕ್ಟ್ರನ್ನು ಕಾಣಬೇಕಾದರೆ, ಕೈಗೆ ಕಬ್ಬಿಣದ ಬೇಡಿಯಿರ ಬೇಕಯ್ಯ!"

"ಏನೇನು ಒದುರುತಿಯಾ? ಈ ಸ್ಟೇಶನಿಗೆ ಇಂದಿನ ಅಧಿಕಾರಿ ಯಾರು? ಕೇಳಿದ ಪ್ರಶ್ನೆಗೆ ಉತ್ತರ ಕೊಡು."

"ಆದೀ ಕಾರೀ! ಶಾಲೆಯ ಮಾಸ್ಟಿಗೆ ಸಬೀನಿಸೀಪೆಕ್ಟ್ರು! ಸಬ್ಇನ್ಸ್ಪೆಕ್ಟ್ರು! ಶಾಲೆಯಲ್ಲಿ ಏನು ಕಲಿಸುತಿಯಾ, ನೀನು? ನಿಲ್ಲು, ನಾನು ಕಲಿಸುತ್ತೇನೆ ನಿನಗೆ!" ಎಂದು ಪುಂಡರೀಕನನ್ನು ದೂಡಿ ಬಿಟ್ಟನು ಜವಾನನೊಬ್ಬನು.

"ಏನು ದೂಡುತ್ತೀಯಾ? ಮೈಗೆ ಮುಟ್ಟುವಷ್ಟು ಹಿಟ್ಲರ್ ಆಗಿ ಬಿಟ್ಟೆಯಾ?" ಎಂದು ಜವಾನನ ಟೊಪ್ಪಿಯ ನಂಬರು ನೋಡಲಿಕ್ಕೆ ಪುಂಡರೀಕನು ಕಣ್ಣರೆಪ್ಪೆ ಮೇಲಕ್ಕೇರಿಸಿದನು.

"ನಂಬ್ರು ಗುರುತಿಸುತಿಯಾ, ಘಟಿಂಗಾ? ಸೂ—ಮಗಾ, ಇಕೋ ನನ್ನ ನಂಬ್ರು!" ಎಂದು ಟೊಪ್ಪಿಕೆಳಗಿಸಿದನು ಬ್ರಿಟಿಷ್ ಸರ್ಕಾರದ ಅಡಿಗಲ್ಲು ಪೋಲೀಸ್ ಕೊನ್ಸ್ಟೇಬಲ್ಲು!

"ಬ್ರಿಟಿಷ್ ಸರ್ಕಾರದ ಲಾಂಛನ ಸ್ವರೂಪನೆ! ಟೊಪ್ಪಿ ಕೆಳಗಿಳಿಸಿದ ಪೋಲಿಸ್ ಕೊನ್ಸ್ಟೆಬಲ್ಲನೆ! ಅರಸನಿಗೆ, ಸರಕಾರಕ್ಕೆ ವಿರೋಧವಾಗಿ ವ್ಯಕ್ತಿ ಸ್ವಾತಂತ್ರ್ಯವನ್ನು ಸ್ಥಾಪಿಸಿದ ಬ್ರಿಟಿಷ್ ನ್ಯಾಯ ಪದ್ಧತಿಯ ನಿರ್ವಾಹಕನೆ, ಆ ಪದ್ಧತಿಯನ್ನು ಕಾಲಿಂದ ತುಳಿದು ಬಿಡುವ ಹಜಾಮನೆ! ನಿನ್ನಿಂದ ಬ್ರಿಟಿಷ್ ಸರಕಾರದ ಅಧಃಪತನವಾಯ್ತೆನ್ನು. ಬಿದ್ದು ಹೋದ ಸರ್ಕಾರದ ಭಗ್ನಾವಶೇಷಗಳಲ್ಲಿ ಹೆಗ್ಗಣನಾಗಿ ಸುಳಿಯುವವನೆ! ದಿಗಂತವ್ಯಾಪಿ ಬ್ರಿಟಿಷ್ ಸಾಮ್ರಾಜ್ಯವು ಅಳಿಯುವಾಗ ಉಳಿದು ಬಂದ ಗೌಡನೆ, ಏನು, ಏನೆಂದೆ? ಏನೆಂದು ಮೈಗೆ ಮುಟ್ಟಿದೆ?" ಎಂದು ಎದೆಯ ಎಡಭಾಗವನ್ನು ಮುಂದಕ್ಕೆ ದೂಡುತ್ತ ಪುಂಡರೀಕನು ಮುಂದೆ ನಡೆಯುಟ್ಟನು.

"ಹೀಗೆಂದು ಮೈಗೆ ಮುಟ್ಟಿದೆ!" ಎಂದು ನೂಕಿದ ನೂಕು ಪುಂಡರೀಕನನ್ನು ಸಾಯ್ಕಲಿನ ಮೇಲೆ ಕೆಡವಿ, ಆ ಸಾಯ್ಕಲು ಅಲ್ಲಿಯೆ ಕೆಳಗೆ ಮಲಗಿದ

ಪೋಲಿಸ್ ಜವಾನರಿಬ್ಬರ ಮೈಮೇಲೆ ಠಣಕ್ಕೆಂದಿತು.

ಒಮ್ಮೆ ಠಣಕ್ಕೆಂದಿತು.

ಆಗೊಮ್ಮೆ ಶಾಂತಿಯುಂಟಾಯಿತು.

ನಿದ್ರೆಯಿಂದ ಬೆಚ್ಚಿಯೆದ್ದ ಪೋಲಿಸ್ ಜವಾನನು ಆಗ,ಕುಂಭಕರ್ಣನು ತನ್ನ ಮೈಮೇಲೆ ನಿಂತ ಹನುಮಂತ ದೇವರನ್ನು ಎಸೆದು ಬಿಟ್ಟಂತೆ ಸಾಯ್ಕಲನ್ನು ಒಮ್ಮೆ ನೂಕಿ, ಎದ್ದು ನಿಂತು, ಪುಂಡರೀಕನ ಈ ಕೆನ್ನೆಗೆ ಒಂದು ಆ ಕೆನ್ನೆಗೆ ಇನ್ನೊಂದು ಏಟನ್ನು ಪಟಪಟನೆ ಕೊಟ್ಟು, ಆತನ ಎರಡೂ ಕಿವಿಗಳನ್ನು ಹಿಂಡಿ, ಹೆಂ ಹೆಂ ಹೆಂ ಎಂದುಸುರುತ್ತ ಆತನನ್ನು ಸರಸರನೆ ಎಳೆದು ಬದಿಗೊತ್ತಿ, ಸಾಯ್ಕಲನ್ನು ಕಾಲಿಂದ ಮುಂದಕ್ಕೆ ದೊಬ್ಬಿ,ಅಲ್ಲಿಯೇ ನೆಲದ ಮೇಲೆ ಒರಗಿ, ಕಂಬಳಿಯನ್ನು ಕಿವಿಯ ವರೆಗೆ ಹೊದ್ದುಕೊಂಡನು.

"ಏನಯ್ಯಾ, ಸ್ಟೇಶನಿನಲ್ಲಿ ಗಲಾಟೆ ಮಾಡುತ್ತೀರಿ," ಎಂದು ಠಾಣೆಯ ಅಧಿಕಾರದಲ್ಲಿದ್ದ ಮುಖ್ಯ ಜವಾನ ಕಣ್ಣುಗಳನ್ನು ಉಜ್ಜಿಕೊಂಡನು.

"ನೋಡಿ, ಸ್ವಾಮಿ, ದೀಪವಿಲ್ಲದೆ ಸವಾರಿ ಮಾಡಿದ್ದೆಂದು ಈ ಹುಡುಗ ನನ್ನು ಹಿಡಿದು ತರುವಾಗ, ಅವನ ಸಹಾಯಕ್ಕೆ ಬಂದೆ. ಈಗ ಸ್ಟೇಶನಿನಲ್ಲಿ ನನ್ನನ್ನು ಬೈದು ದೂಡಿ ಅನ್ಯಾಯ ಮಾಡುತ್ತಿದ್ದಾರೆ," ಎಂದು ಪುಂಡರೀಕನು ಜೆಣ್ಣೆಯಿಂದ ತೆಗೆದ ಕೂದಲಿನ ಹಾಗೆ ಶಬ್ದಗಳನ್ನು ಉಚ್ಚರಿಸಿದನು.

"ಚುಪ್ ಚುಪ್!" ಎಂದು ಮುಖ್ಯಜವಾನ, ತುಟಿಗಳನ್ನು ಉರುಟು ಮಾಡಿದನು.

"ನೀವೇ ಆಲೋಚನೆ ಮಾಡಿ, ಬಿಟ್ಟು ಬಿಡಿ,"ಯೆಂದು ಪುಂಡರೀಕನು ಅಂಗಲಾಚದಿದ್ದರೂ ವಿನಂತಿಸಿಕೊಂಡ.

"ಏನಯ್ಯಾ, ರಿಪೋರ್ಟು ಇದ್ದರೆ ರಿಪೋರ್ಟಿಸು, ಇಲ್ಲದಿದ್ದರೆ ಹೋಗ ಬಿಡು," ಎಂದನಾತ, ಮುಖ್ಯಜವಾನ.

"ರಿಪೋರ್ಟು ಇದೆ," ಎಂದು ಕಾಲುತಾವು ಕಾಗ್ದದ ಮೇಲೆ ಬರೆಯಲು ಅನುವಾಯಿತು. ಪುಂಡರೀಕನ ಹೆಸರು ಕೇಳೋಣಾಯಿತು. ಹುಡುಗನ ಕುಲಗೋತ್ರವೂ ಕೇಳಲ್ಪಟ್ಟಿತು.

"ಮೇಳದ ಜಾತಿ ಉಮಾ ಶಂಕರಕುಮಾರ, ಬೀಡಿನ ಬಂಕು ಕೊಗ್ಗ ಣಾಯ್ಕನ ಸೋದರಳಿಯ."

"ಬಿಟ್ಟುಬಿಡಿ, ಸ್ವಾಮಿ, ಈ ಗಲಾಟೆಯೇಕೆ?"ಎಂದು ಪುಂಡರೀಕನು

ಮತ್ತೆ ರಕ್ತ ತಣ್ಣಗಾಗಿ ಬುದ್ಧಿ ಹೇಳಿದನು.

ಬರೆದ ರಿಪೋರ್ಟು ಓದಲಾಯಿತು.

"ರಥಬೀದಿಯಿಂದ ಹಂಪನಕಟ್ಟೆಗೆ ತಿರುಗುವ ಮಾರ್ಗದ ಸಂದಿನಲ್ಲಿ ಈಹೊತ್ತು ರಾತ್ರೆ ಪೋಲಿಸ್ ಜವಾನ ...ನೇ ನಂಬ್ರದೊಡನೆ ಬೀಟ್ ಮಾಡಿ ಬರುವಾಗ ಹಾಯ್ಸ್ಕೂಲ್ ಮಾಸ್ಟ್ರು ಪುಂಡರೀಕನೆಂಬವನು ದೀಪವಿಲ್ಲದ ಸಾಯ್ಕಲಿನಲ್ಲಿ ಕೂತು ಸವಾರಿ ಮಾಡುತ್ತ ಹಿಂದೆ ಕೆರಿಯರಿನಲ್ಲಿ ಮೇಳದ ಜಾತಿ ಉಮಾ ಶಂಕರ ಎಂಬ ಸಾಧಾರಣ 15 ವರ್ಷ ಪ್ರಾಯದ ಹುಡುಗನನ್ನು ಕುಳ್ಳಿರಿಸಿ ಹೋಗುವಾಗ ತಡೆದು ನಿಲ್ಲಿಸಿ ಸ್ಟೇಶನಿಗೆ ತಂದೊಪ್ಪಿಸಿದ್ದೇವೆ."

ಪುಂಡರೀಕನಿಗೆ ಸಿಡಿಲು ಬಡಿದಂತಾಯಿತು.

ಉಮಾಶಂಕರನಿಗೆ ಕನ್ನಡವೆಲ್ಲ ಮರೆತುಹೋಯಿತು.

ಪುಂಡರೀಕನು ಎದ್ದು ನಿಂತು, ಮುಖ್ಯ ಜವಾನನೆದುರು ಬಂದು, "ಏನ ನ್ಯಾಯಮಾಡುತ್ತೀರಿ? ಈ ಅನ್ಯಾಯ ನೀವು ಮಾಡುತಿದ್ದುದು ಈ ಸ್ಟೇಶನಿಗೆ ಮಾಡುತ್ತೀರಲ್ಲದೆ—ನಿಮ್ಮೆದುರು ನಿಂತ ವ್ಯಕ್ತಿಗಲ್ಲ. ಆಗ ನೀವುಕೊಟ್ಟ ಏಟು ಈ ಪುಂಡರೀಕನಿಗೆಂದು ಎಣಿಸಿದಿರಾ? ಈ ನಿಮ್ಮ ಸ್ಟೇಶನಿನ ಗೋಡೆಗಳಿಗೆ! ಆಗ ಕೊಟ್ಟ ಪೆಟ್ಟು ಈ ಕೆನ್ನೆಯ ಮೇಲೆ ಕಾಣುತಿವೆಯೆ?ಮೆಟ್ಟಿದ ಮೆಟ್ಟು ಈ ಸಾಯ್ಕಲಿನ ಮೇಲೆ ತೋರುತಿದೆಯೆ? ನೋಡಿದ ಕಣ್ಣು ಈ ನಿಮ್ಮ ತಲೆಯು ರುಟಿನಲ್ಲಿ ಅವಿತುಕೊಂಡಿದೆಯೆ?" ಎಂದು ಹೇಳಿದವನೆ ಸರಕ್ಕನೆ ತಿರುಗಿ, ಮುಸಲ್ಮಾನ ಜವಾನನಿಗೆ ಅಭಿಮುಖನಾಗಿ,

"ಬ್ರಿಟಿಷ್ ಸರ್ಕಾರದ ಅಡಿಗಲ್ಲಾದ ಕೊನ್ಸ್ಟೆಬಲ್ಲೆ, ಹಿಂದುಸ್ಥಾನದ ಜನಾಂಗದ ಉಪ್ಪನ್ನು ತಿನ್ನುವ ಮಂಗಳೂರಿನ ಪೋಲಿಸ್ ಜವಾನ ಬಹದ್ದೂರೆ, ಛೀ ಛೀ ಕಾರ ವಿರಲೆ ನಿಮಗೆ? ನಿಷ್ಕಲ್ಮಷವಾದ ಬ್ರಿಟಿಷ್ ನ್ಯಾಯದ ಮೂರ್ತಿಯನ್ನು ಕೆಡೆದೆಯಲ್ಲ? ಅನ್ಯಾಯಮಾಡಿದೆಯಾ? ಮಾಡಿದ ಈ ಅನ್ಯಾಯ ಈ ಗೋಡೆಯಿಂದ ಆ ಗೋಡೆಗೆ ಆ ಗೋಡೆಯಿಂದ ಈ ಗೋಡೆಗೆ ಗುಡುಗುಡಾಯಿಸಿ ಗೋಡೆಗಳೆಲ್ಲ ಕುಸಿದು ಬೀಳುವಾಗ ನೀನೆಲ್ಲಿ ನಿಲ್ಲುವೆ ಕೊನ್ಸ್ಟೆಬಲ್ಲೆ, ನೀನೆಲ್ಲಿ ಹಾರುವೆ ಪೋಲಿಸ್ ಬಹದ್ದೂರೆ?" ಎಂದು ಲೊಕಪ್ಪಿನ ಕಬ್ಬಿಣದ ಗೇಟಿಗೆ ಬೆನ್ನುಕೊಟ್ಟು ಮಾತು ಹಾರಿಸಿದನು ಪುಂಡರೀಕನು.

ಲೊಕಪ್ಪಿನೊಳಗೆ ಮಲಗಿದ್ದ ಆಳೊಬ್ಬ ಗೇಟಿನ ಕಬ್ಬಿಣದ ಸರಳುಗಳನ್ನು ಹಿಡಿದು ಸುಮ್ಮನೆ ಮಿಳಿಮಿಳಿ ನೋಡಿ ನಿಂತನು; ಪುಂಡರೀಕನ ಬೆನ್ನಿಗೆ

ಕೈಬೆರಳಿಂದ ಒತ್ತಿದನು.

ಗೋಡೆಗೆ ತೂಗಹಾಕಿದ ಗಡಿಯಾರ ಗಂಟೆಯೊಂದನ್ನು ಬಾರಿಸಿತು.

ಹಜೂರ ಕಛೇರಿಯ ಜಾಗಟೆ ಗಂಟೆಯೊಂದನ್ನು ಬೀರಿತು.

ಸಮೀಪದ ಮನೆಮಠಗಳಲ್ಲಿನ ಗಡಿಯಾರಗಳೆಲ್ಲಿ ಠಣ್ ಠಣ್ ಎಂದು ಐದು ನಿಮಿಷದ ವರೆಗೆ ಒಂದರ ನಂತರ ಇನ್ನೊಂದೆಂಬಂತೆ ಬಾರಿಸುತ್ತಾ ಹೋದುವು.

"ನೋಡು—ನೀನು ಸಾಯುತ್ತಿ. ರಿಪೋರ್ಟಿನಲ್ಲಿ ಸಾಯ್ಕಲ್ ಸವಾರಿ ಮಾಡುತಿದ್ದುದು ನಾನೆಂದು ಬರೆದಿದ್ದಿ, ನನಗೆ ಸಾಯ್ಕಲ್ ತಿಳಿಯುವುದಿಲ್ಲ. ಸಾಯುತ್ತಿ ನೀನು," ಎಂದು ಕಾರಣಕೊಟ್ಟು ವಾದಿಸಿದನು ಪುಂಡರೀಕ.

ಬರೆದ ರಿಪೋರ್ಟನ್ನು ಹರಿಯಲಾಯಿತು.

ಬಿಗಿದುಕೊಂಡ ಮನಸ್ಸನ್ನು ಸಡಲಿಸಿಯಾಯಿತು.

ಪುಂಡರೀಕನಿಗೊಮ್ಮೆ ಜೀವಬಂದಿತು.

ಉಮಾಶಂಕರನ ಕಣ್ಣು ಪುಂಡರೀಕನ ಮುಖನೋಡಿತು.

"ಕೇಳು—ಮೇಳದಜಾತಿ ಉಮಾಶಂಕರ ಕುಮಾರನು ಸಾಯ್ಕಲ್ ರಾಯಿಡ್ ಮಾಡುತ್ತ, ಹಿಂದೆ ಕೆರಿಯರಿನಲ್ಲಿ ಹಾಯಸ್ಕೂಲ್ ಮಾಸ್ಟ್ರು ಪುಂಡರೀಕನನ್ನು ಕುಳ್ಳಿರಿಸಿ ದೀಪವಿಲ್ಲದ ಸಾಯ್ಕಲ್ ನಡೆಸುತ್ತಾ ಹೋಗುವಾಗ ರಥಬೀದಿಯಿಂದ ಹಂಪನಕಟ್ಟೆಗೆ ತಿರುಗುವ ಮಾರ್ಗದ ಸಂದಿಯಲ್ಲಿ ನಾನೂ ಪೋಲಿಸ್ ಕೋನ್ಸ್ಟೇಬಲ್ಲು....ನೇ ನಂಬ್ರು ಕೂಡ ಅವನನ್ನು ಎರೆಸ್ಟ್ ಮಾಡಿ ಸ್ಟೇಶನಿಗೆ ಒಯ್ದಿರುತ್ತೇವೆ. ಮಾರ್ಗದಲ್ಲಿಯೂ ಸ್ಟೇಶನಿನಲ್ಲಿಯೂ ಪುಂಡರೀಕನ ಜುಲುಮು ಸಹಿಸಲಾಗಲಿಲ್ಲ," ಎಂಬ ಒಕ್ಕಣೆಯ ರಿಪೋರ್ಟು ಡೈರಿಗೆ ಸೇರಿತು.

"ಈಗ?" ಎಂದ ಪುಂಡರೀಕ.

"ಲೋಕಪ್ಪು," ಎಂದರು.

"ಗಂಟೆ ಎರಡಾಯಿತು. ಮನೆಯಿಂದ ಒಂಬತ್ತು ಗಂಟೆಗೆ ಹೊರಟವ. ಮನೆಗೆ ಹೇಳಿಕಳಿಸಿ ಅಥವಾ ಇಲ್ಲಿಯೆ ಮೈದಾನಿನ ಸಮೀಪ ನನ್ನ ಗೆಳೆಯ ಇದ್ದಾರೆ, ಅವರಿಗೆ ತಿಳಿಸಿ—ಜಾಮೀನಿನ ಮೇಲೆ ಹೋಗುತ್ತೇನೆ."

"ಇಸ್ಕೂಲ್ ಮಾಸ್ಟ್ರಿಗೆ ಜಾಮೀನ್ ಯಾರಯ್ಯಾ? ಕಲಿಸು ನೋಡುವಾ,

ಏ ಬೀ ಸೀ ಡಿ ಮಾಯ್ಪುಸೂಡಿ—
ಬಂತೊಂದು ಬೇಡಿ;
ಎರಡೊಂದ್ಲ ಎರಡೊ—
ಊಟಕಾಯ್ತು ಬರಡೋ."

ಪುಂಡರೀಕನು ನಿರುತ್ತರನಾದನು.

ಉಮಾಶಂಕರನು ತುಟಿಗಳನ್ನು ಎಡಕೈಯಿಂದ ಮುಟ್ಟಿ, ಕೆಳಮುಖ ಮಾಡಿ ಕುಳಿತನು.

ಎರಡೂವರೆಯಾಯಿತು. ಸೊಳ್ಳೆಗಳು ಬಂದು ಕಿವಿಚುಚ್ಚಿದುವು.

ಬೀಡಿಯೆಳೆಯುತ್ತ ಕೂತ ಜವಾನರು, "ಮಾಸ್ಟ್ರೆ, ಬೀಡಿಬೇಕೆ?" ಎಂದರು.

"ಸೊಳ್ಳೆ ಉಂಟೆ?" ಎಂದರು.

"ಐದು ರೂಪಾಯಿ ಜುರುಮಾನೆ, ಅಷ್ಟೆ" ಎಂದರು.

ಬ್ರಿಟಿಷ್ ನ್ಯಾಯದ ಶುದ್ಧ ಅಭಿಮಾನಿ ಪುಂಡರೀಕ, ಶುದ್ಧ ನಿರ್ಲೇಪಿ ಬ್ರಹ್ಮಾಂಡಕರ್ಮಯೋಗಿಯಾಗಿಬಿಟ್ಟ.

ಬ್ರಿಟಿಷ್ ನ್ಯಾಯದ ಕೊತ್ತಳದ ಕಾವಲುಗಾರ ಜವಾನರು ಬೀಡಿಯು ಳಿದು ಅಮಲಿನವಶರಾಗಿ ನಿದ್ರಾಂಗನೆಯಿಂದ ಚುಂಬಿತರಾಗಿ ಕೂರಲು ಅನು ವಾದರು.

ರಿಪೋರ್ಟು ಸ್ವೀಕರಿಸಿದ ಅಧಿಜವಾನನು ಟೇಬಲಿನಲ್ಲಿ ತನ್ನ ಮೂಗನ್ನು ಸ್ಥಾಪಿಸಿ, ಆ ಮೂಗಿನ ಸಿಂಹಾಸನದ ಮೇಲೆ ಮುಖವಿಟ್ಟು ಬ್ರಿಟಿಷ್ ನ್ಯಾಯದ ಸಿಂಹನಾದದ ಪಡಿದನಿ ಗೊರಕೆ ಹೊಡೆದನು.

ಬ್ರಿಟಿಷ್ ನ್ಯಾಯದ ಶುದ್ಧ ಅಭಿಮಾನಿ ಪುಂಡರೀಕನು ನೋಡುತಿ ದ್ದುದು ಏನು? ಎದುರಿನ ಗೋಡೆಗಳನ್ನೆ?

ಬ್ರಿಟಿಷ್ ನ್ಯಾಯದ ಶುದ್ಧ ಅಭಿಮಾನಿ ಪುಂಡರೀಕನು ಕೇಳುತಿದ್ದುದು ಏನು? ಗಡಿಯಾರದ ಟಿಕ್ ಟಿಕ್ ನಡೆಯನ್ನೆ?

ಗೋಡೆಗಳನ್ನಲ್ಲ—ಟಿಕ್ ಟಿಕ್ ನಡೆಯನ್ನಲ್ಲ. ಮತ್ತೇನು? ಗೋಡೆ ಗಳಾಚೆ—ಸಿಗಲೇಬೇಕಾದ ನ್ಯಾಯವನ್ನು! ಟಿಕ್ ಟಿಕ್ ನಡೆಯಾಚೆ—ಅನು ಭವಿಸಬೇಕಾದ ನ್ಯಾಯನೀತಿಯನ್ನು.

ಮೂರುಗಂಟೆಯ ಹೊತ್ತು ಹೊಸ ಜವಾನನೊಬ್ಬ ಪುಂಡರೀಕನಿಗೂ ಆತನು ಕಾಣುತಿದ್ದ ಗೋಡೆಗಳಿಗೂ ಮಧ್ಯದಲ್ಲಿ ಬಂದು ನಿಂತನು. ಪುಂಡರೀ

ಕನ ಮುಖನೋಡಿ ಹೊಸಜವಾನ ಬೆಚ್ಚಿಬಿದ್ದನು.

"ಏನು ಸ್ವಾಮಿ, ಏನಾಯ್ತು?" ಎಂದನು.

ಗಡಿಯಾರವು, ಟಣ್ ಟಣ್ ಟಣ್ ಎಂದಿತು.

ಹಜೂರು ಜಾಗಟೆ ಮೂರು ಬಾರಿ ಠಣ್ ಎಂದಿತು.

ಸಮೀಪದ ಮನೆಮಠಗಳ ಗಡಿಯಾರಗಳು ಟಣ್ ಟಣ್ ಎಂದು ಬಾರಿ ಸುತ್ತ ಹೋದುವು.

ನಡೆದ ಸಂಗತಿ ತಿಳಿದಾಯಿತು.

''ಲೊ, ಮುಹಮ್ಮದ್, ವೈಯಕ್ತಿಕ ಜಾಮೀನಿನ ಮೇಲೆ ಬಿಡ್ಬೇಕು ಈ ಮಾಸ್ತ್ರನ್ನ. ಇಲ್ಲದಿದ್ದರೆ ಸತ್ತಿ ನೀನು. ಶರ್ಟಿನ ಮೇಲೆ ಬಂದಿದ್ದಾರೆ, ತಲೆಗೆ ಟೊಪ್ಪಿ ಇಲ್ಲದೆ ಜುಟ್ಟು ಬಿಟ್ಟು ಬಂದಿದ್ದಾರೆ ಎಂದು ಎಬಿಸಿಡಿ ಕಲಿಸುವ ಮಾಸ್ತ್ರೆಂದು ಎಣಿಸಿದೆಯಾ? ಕೇಳವರಿಗೆ ತೀರ್ವೆ ಎಷ್ಟು ಕೊಡುತ್ತಾರೆಂದು? ಸಾಯುವ ಕಾಲಕ್ಕೆ ಏನೇನು ಕಲಿಕಟ್ಟುತ್ತಿದೆ?" ಎಂದು ಹೊಸ ಜವಾನ ಗದರಿಸಿದನು.

ಮುಹಮ್ಮದ್ ಬಂದು, ಪುಂಡರೀಕನ ಮುಖವನ್ನೆ ನೋಡಿದನು. ''ಏನಯ್ಯಾ, ನಾನು ಕೊಡುವ ತೀರ್ವೆ ನನ್ನ ಮುಖದಲ್ಲಿ ಉಂಟೆ?" ಎಂದು ಪುಂಡರೀಕನು ಒಂದು ಮಾತು ಕೇಳಿದನು.

ಇಪ್ಪತ್ತೈದು ರೂಪಾಯಿಗಳ ಪರ್ಸನಲ್ ಬೋಂಡಿನ ಮೇಲೆ ಪುಂಡರೀಕನ ಬಿಡುಗಡೆಯಾಯಿತು.

ಮರುದಿನ ಪ್ರಾತಃಕಾಲ ಪುಂಡರೀಕನು ಹೋದುದು ಸುಪ್ರಸಿದ್ಧ ಕ್ರಿಮಿನಲ್ ವಕೀಲರು ತಳ್ಚೇರಿಯವರಲ್ಲಿ. ನಡೆದ ಸಂಗತಿಗಳನ್ನು ಕುರಿತು ಅರ್ಜಿ ತರಾಯಿಸಿ, ಹತ್ತು ಗಂಟೆಗೆ ಗಾಡಿಯಲ್ಲಿ ಕೂತು ಡಿ. ಎಸ್. ಪಿ. ಯವರ ಬಂಗ್ಲೆಗೆ ಹೋದುದು ಪುಂಡರೀಕನ ಸವಾರಿ. ಆದರೆ, ಮಧ್ಯೆ ಮಾರ್ಗದಲ್ಲಿ ಪುಂಡರೀಕನ ಸವಾರಿಗೆ ಒಂದು ವಿಚಾರದ ಮಿಂಚು ಥಳಕ್ ಎಂದಿತು.

''ಉಮಾಶಂಕರ ಯಾರು? ಶಾಲೆಯಲ್ಲಿ ಯಾವ ತರಗತಿಯಲ್ಲಿದ್ದಾನೆ? ಶಾಲೆಯ ಹುಡುಗನ ಸಹಾಯಕ್ಕೆ ಹೋದೆನೆಂದೆನಲ್ಲ—ಅವ ಯಾವ ತರಗತಿಯಲ್ಲಿದ್ದಾನೆ?"

ಜಟ್ಕಾವಾಲನಿಗೆ ಹಿಂತಿರುಗಲು ಪುಂಡರೀಕನು ಅಪ್ಪಣೆಕೊಟ್ಟ.

''ಯಾವ ಕಡೆಗೆ ಸ್ವಾಮಿ," ಎಂದಾ ಜಟ್ಕಾವಾಲಾ.

"ಹೋಗು, ಹೊಡಿ," ಯೆಂದ ಪುಂಡರೀಕ.

"ಯಾವ ಕಡೆ?"

"ಹೋಗೊ, ಹೇಳ್ತೀನೆ," ಎಂದು ಪುಂಡರೀಕನು ಹೇಳುವಾಗ ಕುದುರೆ ನಾಗಾಲೋಟಕ್ಕೆ ಸುರುಮಾಡಿತು. ಪುಂಡರೀಕನ ತೆಳ್ಳಗಿನ ಮೈ ಹಾರಾಲೋಟಕ್ಕೆ ಮೊದಲು ಮಾಡಿತು. ನಾಗಾಲೋಟದ ಕುದುರೆ ಬಂಡಿಯಲ್ಲಿ ಕೂತು ಸವಾರಿ ಮಾಡುವ ಪುಂಡರೀಕನನ್ನು ಕಂಡು ಸಹೋದ್ಯೋಗಿಗಳು ಮಿಟಮಿಟನೆ ನೋಡಿ ಮುನ್ನಡೆದರು. ತರಗತಿಯ ವಿದ್ಯಾರ್ಥಿಗಳು ಏನೋ ಪಿಸುಗುಟ್ಟಿದರು.

"ಯಾವ ಕಡೆಗೆ ಸ್ವಾಮಿ?" ಪ್ರಶ್ನೆ ಬಂತು.

"ಯಾವ ಕಡೆ ಎಂದರೇನು? ನಾನು ಹೇಳುವ ವರೆಗೆ ಹೋಡಿ, ಹೋಗು," ಎಂದ ಪುಂಡರೀಕ.

"ಆಯ್ತು ದನಿ,ಒಳ್ಳೆ ಇನಾಮು."ಎಂದು ಜಟ್ಕಾವಾಲಾ ಸುಮ್ಮಗಾದ.

ಪತ್ತೆಯಿಲ್ಲದೆ ಉಮಾಶಂಕರನನ್ನು ಹುಡುಕುವುದು ಹೇಗೆ? ಮೇಳದ ಜಾತಿ ಎಂದನಲ್ಲವೆ? ಶಾಲೆಯ ಗುಮಾಸ್ತನನ್ನು ಕೇಳಿದರೆ, ಎರಡು ಸಾವಿರ ವಿದ್ಯಾರ್ಥಿಗಳ ಮಧ್ಯೆ ಅವನಿಗೇನು ಗೊತ್ತು?

"ಹೋಗೋ, ನಡಿ,"ಯೆಂದ ಪುಂಡರೀಕ.

ತಾನೇ ಶಾಲೆಯಲ್ಲಿ ತರಗತಿಯಿಂದ ತರಗತಿಗೆ ನಡೆದು ಹೋದರೆ? ಯಾರು ಏನೆಂದಾರು?

"ನಡಿಸೋ, ಓಡಿಸೋ," ಎಂದ ಪುಂಡರೀಕ.

"ಆಯ್ತು ದನಿ."

ಗಾಡಿ ಓಡಿತು. ಪುಂಡರೀಕನ ಮನಸ್ಸೂ ಓಡಿತು.

ಗಾಡಿ ನಿಂತಿತು.

ಬರೆದ ಅರ್ಜಿಯಲ್ಲಿ ಬಹಳ ಮುಖ್ಯವೇ ಆದರೂ ಚಿಕ್ಕ ತಬ್ದೀಲು ಮಾಡಿ ತಿರುಗಿ ಟಾಯ್ಪ್ ರಾಯ್ಟ್ ಮಾಡಿಸಿ, ಗಾಡಿ ಹತ್ತಿದನು ಪುಂಡರೀಕ. ಗಾಡಿಯೇರುವಾಗ ಎದುರು ಕನ್ನಡಿಯಲ್ಲಿ ಪುಂಡರೀಕನಿಗೆ ಕಂಡುದು ಗೌಡರ ವೇಷ. ಉದ್ದುದ್ದವಾಗಿ ಬೆಳೆದ ಕುರುಚಲು ಗಡ್ಡ ನೋಡಿ,—ಓ ನಿನ್ನೆ ಏಕಾದಶಿ, ಮೊನ್ನೆ ದಶಮಿ, ಅದರ ಹಿಂದಿನ ದಿನ್ಸ ತುಂಬ ಕೆಲ್ಸ—ಅದರ ಹಿಂದೆ ಆಲಸ್ಯ. ಹೀಗಾಗಿ ಕುರುಚಲು ಗಡ್ಡ—ಇವತ್ತು ದ್ವಾದಶಿ—ರಾಜಾ

ಪ್ರತ್ಯಕ್ಷ ದೇವತಾ—ದೇವರಿಗೇನು ಏಕಾದಶಿ,'' ಎಂದು,

"ನಿಲ್ಲಿಸೊ," ಎಂದ ಪುಂಡರೀಕ.

ಗಾಡಿ ನಿಂತಿತು. ಕೆಳಗಿಳಿದು, ಸೆಲೂನು ಹೊಕ್ಕು, ಅಗತ್ಯದ ಕ್ಷೌರವೆಂದು ಒತ್ತಾಯ ಮಾಡಿ, ಯಾರೋ ಒಬ್ಬನನ್ನು ಗೋಕರ್ಣ ಕ್ಷೌರದಲ್ಲಿ ನಿಲ್ಲಿಸಿ, ಮದುಮಗನಾಗಿ ಗಾಡಿ ಹತ್ತಿ, ''ಡಿ. ಎಸ್. ಪಿಗಳ ಬಂಗ್ಲೆ" ಯೆಂದ ಪುಂಡರೀಕ.

ಸರಿ, ಗಾಡಿ ಮುಂದರಿಯಿತು.

ಪುಂಡರೀಕನ ಅರ್ಜಿ ಓದಿದ ಡಿ. ಎಸ್. ಪಿ. ಸಾಹೇಬರು, ಆಂಗ್ಲೇಯರು—ನಕ್ಕು, ಮುಗುಳ್ನಕ್ಕು,—ಅದರ ಮೇಲೆ ಏನೋ ಗೀಚಿದರು, ಪುಂಡರೀಕನಿಗೆ ಹೋಗಬಹುದೆಂದು ಅಪ್ಪಣೆ ಸಿಕ್ಕಿತು.

ಪುಂಡರೀಕನಂದು ಶಾಲೆಯಲ್ಲಿ ರಜೆಚೀಟು ಇಲ್ಲದೆ ಗೈರುಹಾಜರಿ. ರಜೆಚೀಟಿಲ್ಲದ ಗೈರುಹಾಜರಿ ಮಹಾಪರಾಧಗಳಲ್ಲಿ ಪ್ರಥಮವೆಂದು ನಿಮಗೆ ಬೇರೆ ಹೇಳಬೇಕಾಗಿಲ್ಲವಷ್ಟೆ? ಗೈರುಹಾಜರಿಯ ಕಾರಣ ಬರೆಯುವಾಗ ಪುಂಡರೀಕನ ಕೈ ನಡುಗಿತ್ತು, ಮನಸು ಹಿಂಜರಿದಿತ್ತು.

ಆದರೆ,............ಆದರೆ............

ಮೇಳದ ಜಾತಿ ಉಮಾ ಶಂಕರನೆಲ್ಲಿ? ಅವನನ್ನು ಹುಡುಕಬೇಕಾಯಿತು. ಪುಂಡರೀಕನು ರಥಬೀದಿಯಿಂದ ಹೋಗುವಾಗ ಅಲ್ಲಿಯೇ ಕಾಣಬೇಕೆ ಉಮಾಶಂಕರನು, ಬೀಡಿಯೊಂದನ್ನು ಸೇದುತ್ತಿರುವವನು?

ಇಬ್ಬರೂ ಕಾಫಿ ಕುಡಿದರು. ಮನೆಗೊಮ್ಮೆ ಬರಬೇಕೆಂದು ಸೋದರ ಮಾವ ಹೇಳಿದಾನೆಂದು ಉಮಾಶಂಕರ ಮೆಲ್ಲಗೆ ಉಸುರಿದ. ''ಆದರೆ ನೋಡು, ಉಮಾ ಶಂಕರ್, ನಮ್ಮ ಶಾಲೆಯ ಯಾವ ತರಗತಿಯಲ್ಲಿ ನೀನಿರುವಿ?"

''ಶಾಲೆ ಬಿಟ್ಟಿದ್ದೇನೆ, ಸಾರ್."

''ಹೆಂ ಹೆಂ ಹೆಂ ಏನು?'' ಎಂದು ಪುಂಡರೀಕನು ಗಾಬರಿಯಾದ.

'' ಶಾಲೆ ಬಿಟ್ಟು ಮೂರು ವರ್ಷವಾಯ್ತು. ಎಲಿಮೆಂಟರಿ ಶಾಲೆಗೆ ಹೋಗುತಿದ್ದೆ.''

''ಹೇ ಏನು? ಏನು? ನನ್ನ ಪರಿಚಯವುಂಟೆಂದೆಯಲ್ಲ?'' ಪುಂಡರೀಕನ ಗಾಬರಿ ದ್ವಿಗುಣಿತವಾಯಿತು.

"ಪರಿಚಯವಿದೆ ನೋಡಿ, ಅಷ್ಟೆ!"

ಪುಂಡರೀಕನ ಮೈ ಮೇಲೆ ವಜ್ರಾಘಾತವಾಯಿತು.

"ಮಾರಾಯಾ, ತೊಂದರೆ ಮಾಡಿದೆಯಲ್ಲ, ಸುಳ್ಳು ಹೇಳಿದೆಯಲ್ಲ?" ಎಂದು ಪುಂಡರೀಕನು ಫಿಟ್ಟುಸಿರಿಟ್ಟನು.

"ಇಲ್ಲ ಸಾರ್, ಸುಳ್ಳು ಹೇಳಿಲ್ಲ."

"ನಮ್ಮ ಶಾಲೆಯುವನು ಎಂದೆಯಲ್ಲ?"

"ಹಾಗೆ ಹೇಳಿಲ್ಲ, ಸಾರ್ ಎಂದು ನಿಮ್ಮನ್ನು ಕರೆದು ಬಿಟ್ಟೆ."

"ಫಡಚ್ಚಾ ಆಯ್ತು ಈಗ, ಏನು ಮಾಡ್ವುದು ಈಗ."

"ಈಗ ನೀವು ಹೇಳಿದಂತೆ ನಡೆಯುತ್ತೇನೆ."

"ಹಾಗಾದರೆ ಇದರ ಇತ್ಯರ್ಥವಾಗುವ ತನಕ ಪ್ರತಿ ದಿನ ಬೆಳಿಗ್ಗೆ ಎಂಟಕ್ಕೆ, ಸಾಯಂಕಾಲ 5ಕ್ಕೆ ಈ ಹೋಟ್ಲಿನಲ್ಲಿ ನನಗೆ ಸಿಗಬೇಕು," ಎಂದು ಪುಂಡರೀಕನೆಂದ.

"ಆದೀತೆಂ"ದು ಉಮಾಶಂಕರನು ಒಪ್ಪಿದಾಗ, ಪುಂಡರೀಕನಿಗೆ ಜೀವ ಬಂತು.

ಮೂರು ದಿವಸಗಳ ನಂತರ ಪುಂಡರೀಕನ ಅರ್ಜಿಯ ಮೇಲೆ ವಿಚಾರಣೆ ನಡಿಸಬೇಕೆಂದು ಡಿ. ವಾಯ್. ಎಸ್. ಪಿ. ಗಳಿಗೆ ಅಪ್ಪಣೆ ಬಂತು. ಅಷ್ಟರೊಳಗೆ ಪುಂಡರೀಕನ ಮೇಲಿನ ತಕರಾರು ಬೆಂಚು ಕೋರ್ಟಿನ ಎದುರು ಹೋಗಬೇಕಿತ್ತು. ಹೋಗಿಲ್ಲವೆಂದು ವಿಚಾರಿಸಿ ತಿಳಿದಿತ್ತು. ಸಾಯ್ಕಲನ್ನು ನಡೆಸಿ ಹೋಗುವವನೊಡನೆ ಇನ್ನೊಬ್ಬನು ಇದ್ದದ್ದೇ ಆದರೆ, ಯಾವೊಂದು ಪೋಲೀಸ್ ಜವಾನನಿಗೆ ಒಂದು ಕಾಫಿ ಕುಡಿಯ ಬೇಕೆಂದು ಗಂಟಲು ಆರಿದ್ದೇ ಆದರೆ, ಅವರಿಬ್ಬರನ್ನೂ ಹಿಡಿದು ಬಿಡುವುದು ಪಟ್ಟಣದಲ್ಲಿ ಒಂದು ರೂಢ ಮೂಲವಾದ ಪದ್ಧತಿಯಾಗಿತ್ತು. ತರಗತಿಯ ಸುಲೇಮಾನ್ ಎಂಬ ವಿದ್ಯಾರ್ಥಿ ಸೀನು ಪೂಜಾರಿಯೊಡನೆ ಹಾಗೆಯೆ ಒಮ್ಮೆ ಹಿಡಿಯಲ್ಪಟ್ಟು, ಬೆಂಚ್ ಕೋರ್ಟನ್ನು ಒಂದು ದ್ವಾರದಿಂದ ಹೊಕ್ಕು ಕೋರ್ಟಿನೆದುರು ತಪ್ಪು ಒಪ್ಪಿ, ಎರಡೆರಡು ರೂಪಾಯಿ ಜುರುಮಾನೆ ತೆತ್ತು—ಇನ್ನೊಂದು ದ್ವಾರವಾಗಿ ಹೊರಗೆ ಹೋಗುವಾಗ—ಎಂಟಾಣೆಯಲ್ಲಿಯೆ ಸುಧಾರಿಸುತಿತ್ತು ಎಂದು ಪಿಸುಗುಟ್ಟಿದುದು ಗೊತ್ತಾಯಿತು.

ವಾರ ಪತ್ರಿಕೆ ಸಂಪಾದಕರು ಬಂದು ಈ ವಿಚಾರ ತಮ್ಮ ಪತ್ರಿಕೆಗೆ

ಬಾತ್ಮಿ ಕೊಡಬೇಕೆಂದು ವಾದಿಸಿದರು.

ಶಾಲೆಯ ಮುಖ್ಯೋಪಾಧ್ಯಾಯರು ತಲೆಯ ಮೇಲಿನ ಟೊಪ್ಪಿಯನ್ನು ಮೆಲ್ಲನೆ ಕೆಳಗಿಟ್ಟು ಹಣೆಯ ಮೇಲಿನ ಬೆವರನ್ನೆಲ್ಲ ಎಡಗೈ ಬೆರಳಿಂದ ಕೆಳ ಬೀಳಿಸುತ್ತ,

"ಹಾಯ್ ಕೋರ್ಟಿನ ವರೆಗಾದರೂ ಚಿಂತೆಯಿಲ್ಲ–ಬಿಡ ಬೇಡ–ನೈಮಿತ್ತಿಕ ರಜೆ ಬೇಕಾದರೆ ಕೊಟ್ಟೇನು," ಎಂದರು.

ಸ್ವರೂಪ ವಾಗ್ವಾಣಿ ಥಿಯೇಟರಿನ ಬಾಬಯ್ಯಾ ನಾಯ್ಕರು ಬಂದು,

"ಸೂಳ್ಯಮಗಾ ಸಬ್ ಇನ್‌ಸ್ಪೆಕ್ಟ್ರು ಕೂಡ ಮೊನ್ನೆ ಒಂದು ತಕರಾರಿನಲ್ಲಿ ಜಾಮೀನ್ ಮೇಲೆ ನಮ್ಮ ನೌಕರರನ್ನು ಬಿಡಿಸಲಿಕ್ಕೆ ಹೋದಾಗ ನನ್ನನ್ನು ಅಪರಾಧದಲ್ಲಿ ಸೇರಿಸಿದ್ದಾನೆ. ಆ ಸಬ್ ಇನ್‌ಸ್ಪೆಕ್ಟ್ರನ್ನೂ ನಿನ್ನ ಅರ್ಜಿಯಲ್ಲಿ– ಇಲ್ಲದಿದ್ದರೆ ಈಗ ವಾಗ್ಮೂಲದಲ್ಲಿ ಸೇರಿಸಿ ಬಿಡು. ನಾನಿದ್ದೇನೆ," ಎಂದು ಸಿಗರೇಟು ಸೇದಿ ಪುಂಡರೀಕನ ತಲೆ ತಿರುಗುವಂತೆ ಮಾಡಿದರು.

ಪುಂಡರೀಕನ ತಂದೆ, "ಎಂದೂ ಆಗದ ಸಂಗತಿ ಕುಟುಂಬದಲ್ಲಿ ಆಯಿತಲ್ಲ!" ಎಂದು ತುಟಿ ಕಚ್ಚಿದನು. ಪುಂಡರೀಕನ ಹೆಂಡತಿ, "ಬೇರೆಯವರಿಗೆ ಪರೋಪಕಾರ ಬೇಡ ಎಂದರೆ ಯಾರು ಕೇಳುತ್ತಾರೆ.?" ಎಂದು ಕೊಂಕು ಮಾತಾಡಿದಳು.

ಪಟ್ಟಣದ ಪ್ರಸಿದ್ಧ ಜವಳಿ ವ್ಯಾಪಾರಿ ಮೋಹನ್ ಲಾಲ್ ಬಂದು– "ಬಿಡಬೇಡಿರಿ–ಏಕ್ ತಿಂಗಳ ಹಿಂದೆ ಅದ್ದೇ ಜವ್ವಾನ ಅದ್ದೇ ಹಿಕ್‌ಮತ್ ಫಿರ್‌ಮಾಡಿ ಐದ್ ಐದ್ ರೂಪ್ಯಾ ರೂಪ್ಯಾ ಕಸಿದುಕೊಂಡಿದ್ದಾನೆ," ಎಂದು ಜವಾನನನ್ನು ಬೈದು ಹೋದನು.

ತಾಲೂಕು ಆಫೀಸಿನ ಗುಮಾಸ್ತ ರಾಮಯ್ಯ ಶೆಟ್ಟಿ ಬಂದು, "ಮಾರ್ಗದ ಬದಿ ಮೂತ್ರ ಶಂಕೆ ಮಾಡಿದ್ದೆಂದು ನನ್ನೊಡನೆ ಎಂಟಾಣೆ ವಸೂಲು ಮಾಡಿದಾನೆ ಅದೇ ಜವಾನ!" ಎಂದು ಜವಾನನ ನಂಬರು ಹೇಳಿ ಬಿಟ್ಟ.

ಪುಂಡರೀಕನ ಮನೆಯಾಚೆ ಕಸಾಯಿ ವೀರಣ್ಣನ ಮಗ ಬಂದು, "ಆ ಜವಾನನ ಮೇಲೆ ಒಂದು ವಿಚಾರಣೆಯಿದೆ. ಹತ್ತಿಪ್ಪತ್ತು ಜವಾನರಿಗೆ ಹೆಂಡ ಕುಡಿಸಿ ಒಟ್ಟು ಒಂದು ಮನೆ ಹೊಕ್ಕು ಗಲಾಟೆ ಮಾಡುತ್ತ—ತಾನೇ ಸ್ಟೇಶನಿಗೆ ಬಂದು ಮೇಲಾಫಿಸರರಿಗೆ ಸವಲತ್ತು ಕೊಟ್ಟು ಅವರೆಲ್ಲರನ್ನು ಹಿಡಿಸಿದ್ಧ," ಎಂದು ಕತೆಗಾರಂಭಿಸಿದನು.

ಪುಂಡರೀಕನ ವಿಚಾರಣೆ ಹನ್ನೊಂದು ಗಂಟೆಗೆ ಪ್ರಾರಂಭವಾಗುವಾಗ ಆ ಇಬ್ಬರು ಪೋಲೀಸ್ ಜವಾನರೂ ಮೇಳದ ಜಾತಿ ಉಮಾ ಶಂಕರ ಕುಮಾರನೂ ಹಾಜರಿದ್ದರು. ವಿಚಾರಣೆ ಎರಡು ಗಂಟೆಗೆ ಮುಗಿಯಿತು. ಪೋಲಿಸ್ ಜವಾನರ ಸವಾಲು, ಅಡ್ಡ ಸವಾಲು ಎಲ್ಲ ಇದ್ದು, ಅದೊಂದು ನ್ಯಾಯಾಲಯವೆಂಬಂತೆ ತೋರಿತು. ವಿಚಾರಣೆ ನಡೆದಾಗ ಹೇಳಿದ ಮುಚ್ಚಳಿಕೆಯನ್ನು ಓದಲು ಪೋಲಿಸ್ ಆಫೀಸರರು ತಾವು ಬರೆದುದನ್ನು ಪುಂಡರೀಕನಿಗೆ ಕೊಟ್ಟರು. ಪುಂಡರೀಕನು ಅದನ್ನು ಓದುವಾಗ,

"ನನ್ನ ಬರೆಹ, ನಿನ್ನ ವಿದ್ಯಾರ್ಥಿಗಳ ಬರೆಹಕ್ಕಿಂತ ಕೀಳಲ್ಲವಲ್ಲ?" ಎಂದು ನಕ್ಕು ಕೇಳಿದರು, ಆ ಪೋಲಿಸ್ ಆಫೀಸರರು.

"ಮುತ್ತಿನಂತಹ ಅಕ್ಷರ," ಎಂದು ಪುಂಡರೀಕದಂತೆ ಬಿಳಿ ಮನಸ್ಸುಳ್ಳ ಪುಂಡರೀಕನೆಂದ.

"ಸರಿಯೆ, ಇಂತಹವರನ್ನು ನಿಮ್ಮ ಶಾಲೆಯಲ್ಲಿ ತರಬೇತಿ ಗೊಳಿಸದೆ ಕಳುಹಿಸುತ್ತೀರಲ್ಲ?" ಎಂದು ಕುರ್ಚಿಯಿಂದ ಎದ್ದು ನಿಂತರು, ಆ ಆಜಾನುಬಾಹು ಪೋಲಿಸ್ ಆಫೀಸರರು—ಪೋಲಿಸ್ ಜವಾನರ ಕಡೆಗೆ ಅಪಾಂಗ ಸೂಚನೆಯಿತ್ತು.

"ಶಾಲೆಯೊಂಬುದು ಸಂಸಾರದ ಒಂದು ವಿಭಾಗವೆ," ಎಂದು ನಕ್ಕು ನುಡಿದ ಪುಂಡರೀಕನು.

ನಾಲ್ಕು ದಿವಸಗಳ ನಂತರ ಪೋಲಿಸ್ ಜಿಲ್ಲಾಧಿಕಾರಿಗಳಿಂದ ಬಂದ ಪತ್ರದಲ್ಲಿ ಪುಂಡರೀಕನ ಮೇಲೆ ಫಿರ್ಯಾದು ಇಲ್ಲ, ಸಂಬಂಧ ಪಟ್ಟ ಜವಾನರ ಮೇಲೆ ತಕ್ಕ ಗಮನ ತೆಗೆದುಕೊಳ್ಳಲಾಗಿದೆಯೆಂದು ನಿರೂಪ ಬಂತು.

"ಹಿಪ್, ಹಿಪ್, ಹುರಾ!" ಎಂದು ಪುಂಡರೀಕನು ಹಾರಿ ನಿಂತನು.

ಅಂದಿನಿಂದ ಇಂದಿನ ತನಕ ಈ ಕತೆ ಹೇಳಿ, ಸಾಕಾಗಿ ಪುಂಡರೀಕನು ಸೋತು ಸಾಯ್ಕಲ್ ಕಲಿತನು.

ಮಾರ್ಗದಲ್ಲಿ ಸಿಕ್ಕಿದಾಗಲೆಲ್ಲ ಪುಂಡರೀಕನಿಗೆ ಮೇಳದ ಜಾತಿ ಉಮಾ ಶಂಕರ ಕುಮಾರನು ಎಡಗೈಯಿಂದಲೊ ಬಲಗೈಯಿಂದಲೊ ಸಲಾಮು ಹೊಡೆಯುತಿದ್ದಾನೆ.

ಫಕ್ಕನೆ ಮಾರ್ಗದಲ್ಲಿ ಸಂಧಿಸಿದ ಅವನ ಸೋದರ ಮಾವ ಎಳೆಯುತ್ತಿದ್ದ ಸಿಗರೇಟನ್ನು ಕೆಳ ಬಿಸುಟು ಎರಡೂ ಕೈಯಿಂದ ನಮಸ್ಕರಿಸುತ್ತಾನೆ.

ಪೋಲಿಸ್ ಕೊನ್ಸ್ಟೆಬಲ್ ಮಹಮ್ಮದ್ ಬ್ಯಾರಿ ಈಗ ಫೇರಿಗಳ ವ್ಯಾ

ಪಾರವನ್ನು ಮಿಾನು ಮಾರ್ಕೆಟಿನ ಬಳಿ ಮಾಡುತ್ತಿದ್ದಾನೆ. ಅಗತ್ಯವಾಗಿ ನಿವೃತ್ತನಾಗಲು ಜಿಲ್ಲಾಧಿಕಾರಿಗಳ ಅಪ್ಪಣೆ ಬಂದೊಡನೆ ಆ ವ್ಯಾಪಾರವನ್ನು ಕೈಕೊಂಡು ದಕ್ಷತೆಯಿಂದ ಅದನ್ನು ಸಾಗಿಸುತ್ತಿದ್ದಾನೆ. ಅವನ ಸಂಗಾತಿ ಹೊಲೆಯ ಜವಾನ ಒರೇಯೊಂದು ಜಾಗ್ರತೆಯ ಅಂಕುಶಕ್ಕೆ ಒಳಗಾಗಿಸಲ್ಪಟ್ಟು-ಉಡುಪಿಗೆ ವರ್ಗಾಯಿಸಲ್ಪಟ್ಟು-ಪುಂಡರೀಕನನ್ನು ಒಮ್ಮೆ ಕಂಡು ತಟಸ್ಥನಾಗಿದ್ದಾನೆ.

"ನನ್ನ ಪರಿಚಯುವಿದೆಯೆ?" ಎಂದು ಪುಂಡರೀಕನು ಆತನಿಗೆ ಕೇಳಿದಾಗ,

"ಸರಿಯಾದ ಪರಿಚಯುವಿದೆ, ಮರೆಯಲಾರೆ," ಎಂದು ಆತನು ತಲೆ ಟೊಪ್ಪಿ ತೆಗೆದು ಉತ್ತರವಿತ್ತಿದ್ದಾನೆ.

ಆತನು ತಲ ಟೊಪ್ಪಿ ತೆಗೆದುದು ಏಕೆಂದು ಗೊತ್ತುಂಟೆ?

ನಿಮಗೆ ಆತನ ನಂಬರು ತಿಳಿಯಬಾರದೆಂದೆ, ಇರಬಹುದು.

## ೧೨. ಪುಂಡರೀಕನ ಪೌರೋಹಿತ್ಯ

ನೀವುಗಳು ಸಂಪ್ರದಾಯುವಾದಿಗಳೇ ಆಗಿದ್ದರೆ, ನಿಮಗೊಂದು ನನ್ನ ಪ್ರಶ್ನೆಯಿದೆ. ನಿಮ್ಮ ಮನೆಯಲ್ಲಿ, ನಿಮ್ಮ ಸಂಸಾರದಲ್ಲಿ ನೀವುಗಳು ಕಟ್ಟಿಕೊಂಡುಬಂದಂತಹ ಹೆಂಡತಿ ಹೆಣ್ಮಕ್ಕಳಿಗೂ ನಿಮ್ಮ ಹಟ್ಟಿಗಳಲ್ಲಿ ನೀವುಗಳು ಕಟ್ಟಿಬರುವಂತಹ ದನಕರುಗಳಿಗೂ ಏನೊಂದು ವ್ಯತ್ಯಾಸ ವಿರುವುದಿಲ್ಲ ವಲ್ಲವೆ? ಹಟ್ಟಿಯಲ್ಲಿಯೇ ಹುಟ್ಟಿ, ಅಲ್ಲೇ ಬೆಳೆದು, ಅಲ್ಲಿಯೇ ಅಸ್ಥಿಯನ್ನು ಕೆಳಗಿಡುವ ದನಕರುಗಳು, ಎಮ್ಮೆಕೋಣಗಳು, ಹಟ್ಟಿಯಿಂದ ಹೊರಗೆ ಹತ್ತು ಹೆಜ್ಜೆ ಮುಂದಕ್ಕೆ ಹೋಗಿ, ಹುಲ್ಲುಗಾವಲಿನ ಸ್ವಾತಂತ್ರ್ಯವನ್ನು ಪಡೆದಿರುತ್ತವೆಯೆ? ಹುಲ್ಲುಗಾವಲಾದರೂ ನಿಮ್ಮ ಪಟ್ಟಣದಲ್ಲಿ ಎಲ್ಲಿದೆ? ಕೊಚ್ಚಿಯಿಂದ ಬಂದ ಹಿಂಡಿ, ಗುರಪುರದಿಂದ ಬಂದ ಹುಲ್ಲು, ಉಳ್ಳಾಲದಿಂದ ಬಂದ ಹಗ್ಗ ಇವುಗಳಿಗಲ್ಲ ನಿಮಗೆ ದಿನನಿತ್ಯ ಸಿಕ್ಕುವುದು ಎರಡುಸೇರು ಬೆಳ್ಳಗಿನ ಹಾಲು, ಒಂದುಬುಟ್ಟಿ ಕಪ್ಪಗಿನ ಸೆಗಣಿ! ಅಂತೆಯೆ, ಕೈಗಳಿಗೆ, ಕೊರಳಿಗೆ, ಕಿವಿಗಳಿಗೆ, ಮೂಗಿಗೆ ಬಂಗಾರ ಬೆಳ್ಳಿಯ ಆಭರಣಗಳನ್ನಿಟ್ಟು, ರೇಶನ್ ಅಂಗಡಿಯ ಅಕ್ಕಿ ಜೋಳವನ್ನುಕೊಂಡು ಬದುಕಿಸಿ ಬಂದ ನಿಮ್ಮ ಹೆಂಡತಿ ಹೆಣ್ಣುಮಕ್ಕಳು ಅಂಗ

ಳವನ್ನು ಬಿಟ್ಟು, ಹೊರಗೆ ನಡೆದದು ಇದೆಯೆ? ಊರಿನ ಚಲಚ್ಚಿತ್ರಮಂದಿರವನ್ನು, ಊರಿನ ನಾಟಕ ಶಾಲೆಯನ್ನು ಅವರೆಷ್ಟು ಬಾರಿ ಸಂದರ್ಶಿಸಿರಬಹುದು? ಹದಿನೆಂಟುಮೈಲು ದೂರದ ಆಕೆಯ ನೆಂಟರಿಷ್ಟರಲ್ಲಿ ಕಳೆದ ಇಪ್ಪತ್ತು ವರ್ಷಗಳ ಕಾಲ ಎಷ್ಟು ಜನನ, ಎಷ್ಟು ಮರಣವಾಗಿದೆ, ತಿಳಿದಿದೆಯೆ? ಇಲ್ಲವಷ್ಟೆ?

ಸಂಪ್ರದಾಯವಾದಿಗಳಾಗಿ, ನೀವೇನನ್ನು ಮಾಡುತ್ತಿರುವಿರಿ, ಏನನ್ನು ಬಿಟ್ಟುಬಿಡುತ್ತಿರಿವಿರಿ ಈ ವಿಷಯದಲ್ಲಿ ನನಗೆ ನಿಮ್ಮೊಡನೆ ಕಾಳಗವಿಲ್ಲ; ಏಕೆಂದರೆ, ಚಲಚ್ಚಿತ್ರ ಪ್ರದರ್ಶನಕ್ಕೆ ಸುಧಾರಣೆಹೊಂದಿದ ದಂಪತಿಗಳಿಬ್ಬರು ಹೋಗುತ್ತಿರುವಾಗ, ನೀವು ಅವರ ವಿಷಯದಲ್ಲಿ ಅಸೂಯೆ ಪಟ್ಟದ್ದಿಲ್ಲ. ತಮಗೆ ಬೇಕಾದ ವಕೀಲರಲ್ಲಿ ಹೋದಾಗ ಆತನ ಹೆಂಡತಿ ಅಲ್ಲಿಯೆ ಮೇಜಿನೆದುರು ಇಟ್ಟ ವೃತ್ತಾಂತ ಪತ್ರಿಕೆಯನ್ನು ಓದುವಾಗ,"ಅಮ್ಮಾ, ಪೇಪರಿನಲ್ಲಿ ಏನು ವಿಶೇಷವಿದೆ,'' ಎಂದು ನೀವು ಕೇಳುತ್ತಿದ್ದಾಗ, ನಿಮ್ಮಲ್ಲಿ ಖಂಡಿತವಾಗಿಯೂ ದ್ವೇಷವಾಗಲಿ, ಅಸೂಯೆಯಾಗಲಿ, ಯಾವುದೊಂದು ಮತ್ಸರವಾಗಲಿ ಇದ್ದಿಲ್ಲ. ಅದಕ್ಕಾಗಿಯೆ ಹೇಳುತ್ತಿರುವೆನು, ಸುಧಾರಣೆ ಹೊಂದಿ ಜಗತ್ತು ಮುಂದರಿಯುವಾಗ, ಸಂಪ್ರದಾಯವಾದವು ಸುಧಾರಣೆಯ ಬೆನ್ನಿನಲ್ಲಿ ಒಮ್ಮೊಮ್ಮೆ ಕೂತು, ಒಮ್ಮೊಮ್ಮೆ ಅದರ ಸೆರಗುಹಿಡಿದು ಒಮ್ಮೊಮ್ಮೆ ಕೆಳಬೀಳುತ್ತಿರುವ ಅವಸ್ಥೆಯಲ್ಲಿ ನಿಂತು ತೋರುತ್ತಿರುವುದು ಸಹಜವಷ್ಟೆ, ಎಂದು?

ಪುಂಡರೀಕನು ಶುದ್ಧ ಸಂಪ್ರದಾಯವಾದಿಗಳ ಮನೆಯಲ್ಲಿ ಹುಟ್ಟಿ ಬೆಳೆದು, ಅಲ್ಲಿಯೇ ತಿಲೋದಕ ಕುಡಿಯುವವನು. ಹಾಗೆಂದು ಹೇಳಿ, ಆ ಸಂಪ್ರದಾಯವಾದದ ಮಡಿಬಟ್ಟೆ, ದ್ವಾದಶಗಂಡೂಶದ ಬಾಯಿ ಮುಕ್ಕುಳಿಸುವಿಕೆ ಇವುಗಳೊಡನೆ, ಲೆಸಿನ್, ರಸ್ಕಿನ್, ಮಿಲ್, ರೂಸೋ ಮುಂತಾದ ವೇದಾಂತಿಗಳ ಸುಳಿಗಳಲ್ಲಿ ಸುಳಿದಾಡಿ ಗಾಂಧಿ ವಿವೇಕಾನಂದರ ಕಾಲುವೆಗಳ ಮೂಲಕವಾಗಿ ಜೀವನ ನಿರ್ದೇಶಮಾಡುತ್ತಿರುವನು. ಹಾಗೆ ಆದುದರಲ್ಲಿ ವಿಶೇಷವಿಲ್ಲ. ನಾನ್ನೂರು ವರ್ಷಗಳ ಹಿಂದೆ ಗೋವೆಯ ಪ್ರಾಂತ್ಯವು ಫಿರೆಂಗಿಯವರ ಫಿರಂಗಿಗಳಿಗೆ ಆಹುತಿ ಬಿದ್ದೊಡನೆ ತಮ್ಮ ದೇವರು ಚಂಬುಚರಿಗೆಗಳನ್ನು ಹಿಡಕೊಂಡು, ಧರ್ಮಸ್ವಾತಂತ್ರ್ಯಕ್ಕಾಗಿ ಈ ತುಳುನಾಡಿನಲ್ಲಿ ಆತನ ಹಿರಿಯರು, ಇಂಗ್ಲೆಂಡಿನಿಂದ ಅಮೇರಿಕೆಯಲ್ಲಿ ಧರ್ಮಸ್ವಾತಂತ್ರ್ಯಕ್ಕಾಗಿ, ತುಂಬುಜೀವನಕ್ಕಾಗಿ ಹೋಗಿ ನಿಂತ ಹಿರಿಯ ತಾತಪಾದರಂತೆ (Pilgrim

Fathers) ಬಂದು ನಿಂತವರಾಗಿದ್ದರು. ಸುಧಾರಣೆಯೆಂಬುದು ಆತನ ಜನಾಂಗಕ್ಕೆ ಉಸಿರಾದರೂ, ಹಳೆಯ ಸಂಪ್ರದಾಯವು ಎಲುಬಿನ ಗೂಡಾಗಿದೆ.

ಪ್ರತಿದಿನ ಒಂಬತ್ತು ತಾಸಿನ ಸುಮಾರಿಗೆ ಶಾಲೆಗೆ ಹೋಗುತ್ತಿರುವ ಪುಂಡರೀಕನು. ಬಿಡುಹೊತ್ತಿನಲ್ಲಿ ಆ ಹಬ್ಬಕ್ಕೆಂದು ಈ ಹಬ್ಬಕ್ಕೆಂದು ಪೌರೋಹಿತ್ಯಕ್ಕೆ ತನಗೆ ಬೇಕಾದ ನಾಲ್ಕೈದು ಪ್ರಾಚೀನ ಮನೆತನಗಳವರಲ್ಲಿ ಹೋಗುವುದು ವಾಡಿಕೆಯಾಗಿದೆ. ಹಾಗೆ ಆತನು ಹೋಗುತ್ತಿದ್ದಾಗ. ಮಾರ್ಗದಲ್ಲಿ ಪ್ರೊಫೆಸರರಾಗಲಿ. ಕವಿಸಂಘದವರಾಗಲಿ, ಇನ್ನಾರಾಗಲಿ ಆತನನ್ನು ಸಂಧಿಸಿದ್ದೆ ಆದರೆ, ಆತನ ಚುರುಕು ಗುರುತೂ ಸಿಕ್ಕಲಿಕ್ಕಿಲ್ಲ. ತರಗತಿಯಿಂದ ತರಗತಿಗೆ ಒಂದು ಕೈಯಲ್ಲಿ ಭೂಪಟ, ಇನ್ನೊಂದು ಕೈಯಲ್ಲಿ ಜೇಡಿನ ತುಂಡು ಡಸ್ಟರು ಹಿಡಿದು ಹೋಗುತಿದ್ದಂತೆ, ಒಂದು ಕೈಯಲ್ಲಿ ನೀರಿನ ಕಲಶ. ಇನ್ನೊಂದು ಕೈಯಲ್ಲಿ ದರ್ಭೆಯು ಸೂಡಿ. ಮತ್ತೊಂದು ಕೈಯಲ್ಲಿ ತೀರ್ಥ ಗಂಧಪ್ರಸಾದ ಹಿಡಕೊಂಡು. ಸಾಧಾರಣ ಮಲಿನವಾದ ಬೈರಾಸನ್ನು ಮಡಚಿ ಬಲಹೆಗಲಮೇಲಿಟ್ಟು, ಶುಭ್ರವಾದ ಯಜ್ಞೋಪವೀತವನ್ನು ಎಡಹೆಗಲಮೇಲಿಂದ ನೇತಾಡಿಸಿ ಸರಕ್ಕನೇ ಆತನು ಹೋಗುವಾಗ,ಎದುರಿನಿಂದ ಬಂದವರು ಯಾರದು? ಈಗ ದಾಟಿದವರು, ಪುಂಡರೀಕನೆ, ಕೋದಂಡನೆ? ಎಂದು ಆಲೋಚಿಸುವುದರೊಳಗೆ, ಪುಂಡರೀಕನು ಮಾರ್ಗದ ಕೊನೆಯ ತಿರುಗಿನಲ್ಲಿ ತಲೆ ಜುಟ್ಟನ್ನು ಮಾತ್ರ ತೋರಿಸಿ ಹೋದುದು ಕಾಣುತಿತ್ತು.

ಹೀಗೆಂದು ನಾನು ಪುಂಡರೀಕನ ಬೆನ್ನಿನಲ್ಲ ಆತನ ಗೇಲಿಮಾಡುತ್ತಿದ್ದೇನೆಂದು ನನ್ನನ್ನು ತ್ರಾಸಿನಲ್ಲಿಟ್ಟು, ನನ್ನ ತಕ್ಕಡಿಯನ್ನು ಮೇಲಕ್ಕೆ ಮಾಡಬಾರದೆಂದು ಬಿನ್ನವಿಸಿಕೊಳ್ಳುತ್ತೇನೆ. ದಸರೆಯ ಸಮಯದಲ್ಲಿ ಕಾಶ್ಮೀರ ದೇಶವಾಸಿನಿ ಸರಸ್ವತೀ ದೇವಿಯ ಪೂಜೆಗಾಗಿ ಆತನು ಮಧ್ಯಾಹ್ನದ ನಡುಹೊತ್ತಿಗೆ —ಕೆಂಪುಬಣ್ಣದ ಮಡಿಯುಟ್ಟು, ಬಲಹೆಗಲಮೇಲೆ ಬೈರಾಸನ್ನು ಇಟ್ಟು, ತಲೆಯಲ್ಲಿ ಜುಟ್ಟನ್ನಿಟ್ಟು, ಎಡ ಹೆಗಲ ಮೇಲೆ ಜನಿವಾರವನ್ನು ತೂಗ ಬಿಟ್ಟು. ಎರಡೂ ಕೈಗಳಲ್ಲಿ ತೀರ್ಥೋದಕ ಕಲಶಾದಿಗಳನ್ನು ಹಿಡಿದು ಹೋಗುವಾಗ ಮಾರ್ಗದ ಬದಿಯಲ್ಲಿ ಕಿಟಿಕಿಯ ಮೇಲೆ ನಿಂತ ಮಗುವೊಂದು, “ವೇಷ ಬಂತು ವೇಷ ಬಂತು,” ಎಂದು ಇತರ ಮಕ್ಕಳನ್ನು ಕರೆವಾಗ, ಪುಂಡರೀಕನು ಹೇಳಿದ ಮಾತನ್ನು ಕೇಳಿರುವೆನು ನಾನು. “ದಸರೆಯ ‘ಚಕನಾಕಿ ಚಟ್ಟಿ, ಬೊಂಭಾಯಿ ಚಟ್ಟಿ’ ಹಿಂದಿನಿಂದ ಬರುತ್ತದೆ; ಅಲ್ಲಿ

ನಿಂತುಕೋ," ಎಂದು ನಗುತ್ತ ಆತನು ಹೇಳಿದ ಮಾತನ್ನು ಕೇಳಿರುವೆನು. ದಸರೆಯ ಹುಲಿವೇಷ, ಕರಡಿವೇಷ, ಬಿಕ್ಕುಸನ್ಯಾಸಿವೇಷ ,ಬ್ಯಾರಿಯವೇಷ ವಿದ್ದಂತೆ ಭಟ್ರುವೇಷ ಎಂಬುದೂ ಇರುವಾಗ, ಪುಂಡರೀಕನೂ ಏಕೆ ಭಟ್ರ ಹಗಲುವೇಷ ಹಾಕಿಕೊಂಡಿದ್ದಿರಬಾರದು?

ಅಂತೂ ಈ ವರ್ಷದ ಗೋಕುಲಾಷ್ಟಮಿಯ ದಿನ ಪುಂಡರೀಕನಿಗೆ ಫಳ್ನೀರಿನ ಆಕಡೆ ಕಲೆಕ್ಟರ ಬಂಗ್ಲೆಯ ಪಶ್ಚಿಮಕ್ಕಿರುವ ಬಿಕರ್ನಕಟೆ ಶ್ಯಾನು ಭಾಗರಲ್ಲಿಯೂ, ಕರಂಗಲಪಾಡಿಯ ಮುಸಾಫರಿ ಕೆರೆಯ ಈ ಕಡೆಯಿರುವ ಸತ್ರಾಳಿ ವೈಕುಂಟ ಹೆಗ್ಡೆಯವರಲ್ಲಿಯೂ, ಮತ್ತೂ ಎರಡುಕಡೆ ಜನ್ಮಾಷ್ಟಮಿ ವ್ರತದ ಪೌರೋಹಿತ್ಯವಿತ್ತು. ಫಳ್ನೀರಿನಲ್ಲಿ ಪೂಜೆಮುಗಿಸಿ ರಾತ್ರೆ ಒಂಬತ್ತುಗಂಟೆ ಯ ಸುಮಾರಿಗೆ ಕರಂಗಲಪಾಡಿಗೂ ಆದರನಂತರ ಇನ್ನಿಬ್ಬರ ಮನೆಗಳಿಗೆ ರಾತ್ರೆ ಎರಡು ಗಂಟೆಯವರೆಗಿನ ಸರತಿ ನಿಶ್ಚಯವಾಗಿತ್ತು. ಪೂರ್ವಕಾಲದಲ್ಲಿ ಗಡಿಯಾರಗಳು ಇಲ್ಲದೆ ನಕ್ಷತ್ರಗಳ ಸಹಾಯದಿಂದ ಸಮಯದ ಅರಿತೆಯಿರು ವಾಗ, ಪುರೋಹಿತರು ಯಾವಾಗ ಬಂದರೂ ದಕ್ಕುತಿತ್ತಾದರೂ, ಈಗ ಮನೆಯ ಯಜಮಾನನನ್ನು ಹಿಡಿದು ಮನೆಬಾಗಿಲು ಕಾಯುವ ನಾಯಿಯ ಕೊರಳಿಗೂ ಮಣಿಗಂಟೆನ ಗಡಿಯಾರಗಳು ಇರುವಾಗ ಪೌರೋಹಿತ್ಯ ವೆಂಬುದು ಸ್ವಲ್ಪ ಕಷ್ಟದ ಕೆಲಸವೇನೋ ಸರಿ; ಆದರೆ ಪುಂಡರೀಕನು ಅದನ್ನೆಲ್ಲ ಹೇಗೋ ಸುಧಾರಿಸಿ ಕೊಳ್ಳುತಿದ್ದನು.

ಜನ್ಮಾಷ್ಟಮಿಯ ವ್ರತಕ್ಕೆ ಆಗತಾನೆ ಸ್ನಾನಮಾಡಿ, ಪಡಿಯುಟ್ಟು ದೇವರೆದುರು ಮರದ ಮಣೆಗಳಲ್ಲಿ ಕೂತು, ಮನೆಯ ಯಜಮಾನನನ್ನು ಹಿಡಿದು ಮೊನ್ನೆಯ ಚೈತ್ರದಲ್ಲಿ ಉಪನಯನವಾದ ರಾಮುವಿನ ವರೆಗೆ ಎಲ್ಲ ವರೂ ತಮ್ಮೆದುರು ತುಳಸಿ ಪತ್ರಗಳ ರಾಶಿಯನ್ನು ಹರಡಿಸಿ ಆಚಮನಕ್ಕೆ ಸುರುಮಾಡುವಾಗ, ಅಲ್ಲಿಯೆ ಮುಂದೆ ಬಗ್ಗಿಕೊಂಡು ದೀಪದ ಜ್ವಾಲೆ ಸರಿ ಮಾಡುತ್ತಿರುವ ಮನೆಯ ಯಜಮಾನಿನಿ ಶ್ಯಾನುಭಾಗಗಿತ್ತಿ, "ಅಯ್ಯಯ್ಯೊ ಭಟ್ರೆ, ಕಿಟ್ಟು ಬರಲಿಲ್ಲವಲ್ಲ!'' ಎಂದು ಹೇಳಿದೊಡನೆ ಕೂತವರೆಲ್ಲರೂ ಕಣ್ಣು ಗಳ ರೆಪ್ಪೆ ಮೇಲೆಮಾಡಿ, ಏನೋ ಜವಾಬುದಾರಿಕೆಯ ಗೌರವದಿಂದ ನಿರುತ್ತರ ರಾದರು.

"ನಾನು ಹೇಳಿಲ್ಲವೆ? ಅಷ್ಟಮಿ ಇಲ್ಲ, ತುಳಸಿಹಬ್ಬ ಇಲ್ಲ, ಜನಿವಾರ ಇಲ್ಲ, ದೇವರಿಲ್ಲ, ಈ ಹುಡುಗರಿಗೆ—ಬರಬೇಕು ಏಳುಗಂಟೆಯ ಒಳಗೆ, ಭಟ್ರಿಗೆ

ತಡವಾಗುತ್ತದೆ ಎಂದರೆ—ಎಲ್ಲಿ ಬಿಕ್ಕೆ ಬೇಡಲಿಕ್ಕೆ ಹೋಗಿದ್ದಾನೆಂದು ಈಗ ನೋಡುವುದು? —ಕೂತುಕೊಂಡಿರಲಿ ಭಟ್ರೆ, ಬರುವ ವರ್ಷ ಅಷ್ಟಮಿ ಅವನಿಗೆ, ಮುಂದರಿಸಿ," ಎಂದು ಯಜಮಾನರ ಮಾತು ಮಕ್ಕಳ ತಾಯಿಗೆ ವಜ್ರಾಘಾತವಾಯಿತು. ಅಲ್ಲಿಯೇ ಕೋಣೆಯಲ್ಲಿ ಕೂತ ಬೆಕ್ಕು ಹಾರಿ ಒಂದು ಜಿರಲೆಯನ್ನು ಹಿಡಿದು ನುಂಗಿಬಿಟ್ಟಿತು.

"ಕಾಂಗ್ರೆಸು ಕಚೇರಿಯಲ್ಲಿ ಯಾವುದೋ ಒಂದು ಭಾಷಣವಂತೆ. ಏಳು ಗಂಟೆಯ ಒಳಗೆ ಖಂಡಿತ ಬರುತ್ತೇನೆಂದು ಕಾಫಿಕುಡಿಯದೆ ಹೋಗಿದ್ದಾನೆ. ಈಗ ಬಂದಾನು ಭಟ್ರೆ," ಎಂದು ಮಕ್ಕಳ ತಾಯಿ ನುಡಿದಳು.

"ಅಹುದು, ಶ್ಯಾನುಭಾಗರೆ; ಮಂಗಳೂರನ್ನು ಕರ್ಣಾಟಕಕ್ಕೆ ಸೇರಿಸಬೇಕೆಂದು ಧಾರವಾಡದ ಆ ಇವರು ಬಂದಿದ್ದಾರೆ. ನನಗೂ ಹೋಗಬೇಕಿತ್ತು. ಬಂದುಕೊಳ್ಳಲಿ," ಎಂದು ಪುಂಡರೀಕನು ಪುರಾಣಬಿಚ್ಚಿದನು.

"ಒಂದು ಕ್ರಮವೂ ಇಲ್ಲ. ಭಾಷಣಗೀಷಣ ಎಲ್ಲ ಈ ವ್ರತದ ದಿವಸವೇ ಇಡಬೇಕು. ಪರವೂರಿನವರಿಗೆ ವ್ರತ ಇಲ್ಲವೆಂದು ಊರಿನವರಿಗೇನು ತಲೆ ಕರಡಾಗಬೇಕು? ಮುಂದರಿಸಿ ಭಟ್ರೆ," ಎಂದು ಯಜಮಾನರ ಅಪ್ಪಣೆಬಂದಾಗ ಸಮೀಪಕೂತ ಹುಡುಗರೆಲ್ಲ ಮಣೆಸರಿಪಡಿಸಿ, ತುಳಸೀ ಪತ್ರಗಳಿಗೆ ಕೈ ಹಾಕಿದರು.

"ಅಂದರೆ, ಗಂಡನಿಗೆ ಹೆಂಡತಿಯಿದ್ದಂತೆ, ವರ್ಷಕ್ಕೊಂದು ಅಷ್ಟಮಿ, ಶ್ಯಾನುಭಾಗರೆ; ಬಂದುಕೊಳ್ಳಲಿ. ನಿಮ್ಮ ಆಳು ಡೊಗ್ರನಿಗೆ ಸಾಯ್ಕಲು ಕೊಟ್ಟು ಕೊಂಗ್ರೆಸು ಕಛೇರಿಗೆ ಕಳುಹಿಸಿರಿ. ಅಷ್ಟರೊಳಗೂ ಬಂದಾನು," ಎಂದು ಪುರೋಹಿತರ ಶಾಸನವೆಂದರೆ ವಸಿಷ್ಠನ ಶಾಸನವಾಗಿ ನಿಂತುಬಿಟ್ಟಿತು.

"ಡೊಗ್ರಾ" ಎಂದು ಒಳಗಿನಿಂದ ರಾಯರ ಸ್ವರವೇರಿದಾಗ, ಸಾಯ್ಕಲಿನ ಅಡಿಯಲ್ಲಿಯೇ ಮಲಗಿ ಗೊರಕೆ ಹೊಡೆಯುವ ಡೊಗ್ರನು ಎದ್ದು ಸಾಯ್ಕಲು ಹಿಡಿದೆಳೆದು ದೀಪಹಚ್ಚಿ "ಎಲ್ಲಿ, ರಾಯರೆ?" ಎಂದು ಕೇಳುವಾಗಲೆ, ಬರಬೇಕೆ ಬೆವರಿನ ಸ್ನಾನಮಾಡಿ ಕಿಟ್ಟು—ತನ್ನ ಸಾಯ್ಕಲಿನಿಂದ ಕೆಳಗಿಳಿದು ಕೊಂಡು? ಕಿಟ್ಟುವನ್ನು ನೋಡಿದ ಯಜಮಾನರು ಮಾತಾಡದೆ ಒಳಹೊಕ್ಕರು. ಕಿಟ್ಟು ಪೈಮೇಲಿನ ಕೋಟು, ಶರ್ಟು ಅದರೊಡನೆ ಅದೇದಿನ ಬೆಳಗ್ಯೆ ಮಂತ್ರಪೂತವಾಗಿ ಹಾಕಿಕೊಂಡ ಯಜ್ಞೋಪವೀತ ಎಲ್ಲವನ್ನೂ ಮೇಜಿನ ಮೇಲೆ ಚೆಲ್ಲಿಕೊಟ್ಟು, ಕಾಲಿನ ಬೂಟ್ಸುಗಳನ್ನು ಕೈಯಿಂದ ಎಳೆದು ಅಲ್ಲಿಯೆ ಉರುಳಿಸಿ

ನೆಟ್ಟಗೆ ದೇವರಕೋಣೆಗೆ ನುಗ್ಗಿ ಬದಿಯಲ್ಲಿದ್ದ ಮಣೆಯಮೇಲೆ ಕೂತೇ ಬಿಟ್ಟನು.

"ಬಂದರಲ್ಲ ಕಿಟ್ಟು ಶ್ಯಾನುಭಾಗರು! ಕಿಟ್ಟು ರಾಯರೆ, ಬಚ್ಚಲಕೋಣೆಗೆ ಹೋಗಿ ಸ್ನಾನಮಾಡಬೇಕು. ಅಥವಾ ಕಾಲುತೊಳೆದು ಬರಬೇಕು. ಮತ್ತೆ ಸಹಸ್ರನಾಮ," ಎಂದು ಪುಂಡರೀಕನು ಹೇಳುವಾಗ ಯಜಮಾನರು ಕಿಟ್ಟುವಿನ ತಾಯಿಯ ಕಡೆ ತಾತ್ಸಾರ ತೋರಿಸಿದರು. ಕಿಟ್ಟು ಒಳಗೆ ನುಗ್ಗಿಬಿಟ್ಟನು. ಆತನ ಹಿಂದಕ್ಕೆ ಆತನ ತಾಯಿ ಮೆಲ್ಲಗೆ ಸರಿದು ಬಿಟ್ಟಳು.

ಸಹಸ್ರನಾಮ ಅಷ್ಟೋತ್ತರದ ಪೂಜೆಯು ಸಾಂಗವಾಗಿಯೂ ಸಪರಿವಾರವಾಗಿಯೂ ನಡೆದಾದ ಅನಂತರ ದೇವರಿಗೆ ಶೃಂಗಾರ ಮಾಡುತ್ತಿದ್ದ ಪುಂಡರೀಕನು ಸಂಭಾಷಣೆಗೆ ಸುರುಮಾಡಿದನು.

"ನೋಡಿದಿರಾ, ಶ್ಯಾನುಭಾಗರೆ! ಒಂಬೈನೂರ ತೊಂಬತ್ತೊಂಬತ್ತು ಹೆಸರುಗಳಿಂದ ಸ್ತುತಿಸಿ, ಹೊಗಳಿದ ಭೀಷ್ಮಾಚಾರ್ಯರು, 'ಸರ್ವಪ್ರಹರಣಾಯುಧಾಯ ನಮಃ,' ಎಂದು, 'ಎಲ್ಲವರನ್ನು ಮರ್ದಿಸುವ ಆಯುಧನೆ ನೀನು,' ಎಂದು ಕಡೆಯ ಹೆಸರಿನಲ್ಲಿ ಕೃಷ್ಣನನ್ನು ರೂಪಿಸಬೇಕೆ? 'ವಿಶ್ವವು ನೀನೆ. ಒಳ್ಳೆಯದು ನೀನೇ. ಕೆಟ್ಟುದೂ ನೀನೆ' ಎಂದು ಹೊಗಳಿ ಹೊಗಳಿ ಶರತಲ್ಪ ಹಿಡಿದುಕೊಂಡ ಭೀಷ್ಮಾಚಾರ್ಯರ ಹೇಳುವುದು, ಎಲ್ಲವರ ಸಂಹಾರ ಮಾಡುವವನು ಕೃಷ್ಣನೆಂದಲ್ಲವೆ?"

ಹುಡುಗರೆಲ್ಲ ಮುಗುಳ್ನಕ್ಕರು. ಯಜಮಾನರು, ಸ್ವಲ್ಪ ಆಲೋಚನೆ ಮಾಡಿದವರು: "ಭಟ್ರೆ, ಇದು ಹೇಗೆಂದು ಎಣಿಸುತ್ತೀರಿ: ಅನಾದಿ ಬ್ರಹ್ಮಚಾರಿಯಾದ ಶ್ರೀ ಕೃಷ್ಣಪರಮಾತ್ಮ, ಷೊಡಶಸ್ತ್ರೀ ಸಹಸ್ರೇಶನಾಗಿ ಭೀಷ್ಮ ಮುಕ್ತಿ ಪ್ರದಾಯಕನಾಗುವುದು?"

"ಅದೇ ಹೇಳುತ್ತಾನೆ, ಟೀಕಾಕಾರನು—'ಶ್ರೀಕೃಷ್ಣಪರಮಾತ್ಮನೆಂದರೆ ಗೀತಾಮೃತ ಮಹೋದಧಿಯಲ್ಲಿ ಜಲಕ್ರೀಡಾಸಮಾಸಕ್ತ ಗೋಪೀವಸ್ತ್ರಾಪಹಾರಕನಾಗಿಯೂ, ಯಮುನಾವೇಗ ಸಂಹಾರದ ನಂತರ ಕಾಳೀಯ ಫಣಿಮಾಣಿಕ್ಯರಂಜಿತ ಶ್ರೀಪದಾಂಬುಜ ಯೋಗಿಯಾಗಿಯೂ, ಸರ್ವಗ್ರಹರೂಪಿಯಾಗಿಯೂ ಪರಾತ್ಪರನಾಗಿ ಕಾಯುವನೆಂ"ದು ಪುಂಡರೀಕನು ಪ್ರವಚನಮುಗಿಸಿದನು—ಮಕ್ಕಳ ತಾಯಿ ತಾನು ತಯಾರಿಸಿದ ಉಂಡೆ ಚಕ್ಕುಲಿಗಳನ್ನೆಲ್ಲ ದೇವರೆದುರು ಹರಡಿ ನಿಂತುಬಿಟ್ಟಳು.

"ನೈವೇದ್ಯಕ್ಕಾಯಿತು," ಎಂದರು ಪುರೋಹಿತರು.

"ಹೌದು ಭಟ್ರೆ, ನೀವು ಕಳೆದ ವರ್ಷ ಆಚೆ ಮನೆ ಇಂತವರಲ್ಲಿ ಅಷ್ಟೋತ್ತರದಲ್ಲಿ ಇಲ್ಲದ ಮಂತ್ರ ಕೂಡಿಸಿ ಏನೋ ಗಲಾಟೆಯಾಯ್ತೆಂದು ಹೇಳುತ್ತಾರಲ್ಲ, ಏನದು?" ಎಂದು ಮನೆಯ ತಾಯಿ ಕೇಳಿದಾಗ ಮಕ್ಕಳೆಲ್ಲ ಪುರೋಹಿತರ ಮುಖವನ್ನೇ ಕಂಡರು.

"ಏನಿಲ್ಲ, ಶ್ಯಾನುಭಾಗರೆ ಅದು. ಪೂಜೆಗೆ ಪ್ರಾರಂಭಮಾಡುವಾಗ ನನ್ನ ಕಿವಿಯಲ್ಲಿ ಹೇಳಿದರು ಆ ಮುದುಕರು, 'ಭಟ್ರೆ ಬಹಳ ಕಷ್ಟದಲ್ಲಿದ್ದೇನೆ; ಕಷ್ಟದಿಂದ ವಿಮೋಚನೆ ದೊರಕಿಸಿ ಕೊಡಬೇಕು,' ಎಂದು."

"ಅಷ್ಟೋತ್ತರದ ನೂರೆಂಟು ಹೆಸರುಗಳು ಮುಗಿದೊಡನೆ ನನ್ನ ಮನಸ್ಸಿನಿಂದ ಹೇಳದೆ ಕೇಳದೆ ನೂರೊಂಬತ್ತನೆ ಹೆಸರು ಬಂತು, 'ಕ್ಷೀರಸಾಗರ ಭಟ್ಟಾಯ ನಮಃ' ಎಂದು.

"ಮುದುಕರೂ ಅವರೊಡನೆ ಕೂತ ಮಕ್ಕಳೂ ಹಾಗೆಯೆ ನುಡಿದು, ತುಳಸಿ ಅರ್ಪಣೆಮಾಡಿದರು. "ಅದರ ಬೆನ್ನಿಗೆ ಬಂತು—'ಮಜ್ಜಿಗೆ ನೀರಿಗೆ ತತ್ವಾರಾಯ ನಮಃ' ಎಂದು.

"ಹಾಗೆ ಕೇಳಿದವರೆ, ಕೈಯಲ್ಲಿ ಹಿಡಿದುಕೊಂಡ ತುಳಸಿಯನ್ನು ಬಿಟ್ಟು ಕೊಟ್ಟು, ಮುದುಕರು ನಿಂತುಕೊಂಡು ಕಣ್ಣುಗಳೆರಡನ್ನೂ ಅರಳಿಸಿ ಬಾಹ್ಯವೆಲ್ಲವನ್ನು ಮರೆತು "ಮಜ್ಜಿಗೆ ನೀರಿಗೆ ತತ್ವಾರಾಯ ನಮಃ" ಎಂದು ಸ್ಪಷ್ಟವಾಗಿಯೂ ಗಂಭೀರವಾಗಿಯೂ ಉಚ್ಚರಿಸುತ್ತ ದೇವರಿಗೆ ಸಾಷ್ಟಾಂಗ ಪ್ರಣಾಮವೆರಗಿದರು. ನನಗಾದ ರೋಮಾಂಚ ಈ ಹೊತ್ತಿಗೂ ಮರೆಯಲಾರದು. ಸಾಷ್ಟಾಂಗವೆರಗಿದ ಮುದುಕರ ಬೆನ್ನಿನಲ್ಲಿಯೆ ಆತನ ಮಡದಿ ಆ ಪಾರ್ವತೀ ದೇವಿ, ಅವರಿಬ್ಬರ ಮಕ್ಕಳು ಆ ಐದಾರು ಸತ್ಪುತ್ರರು ಒಬ್ಬರ ಹಿಂದೆ ಇನ್ನೊಬ್ಬರಾಗಿ ದೇವರಿಗೆ ಸಾಷ್ಟಾಂಗವೆರಗಿದ ಆ ದೃಶ್ಯ — ಇಂದಿಗೂ ನನಗೆ ಮರೆತುಹೋಗಿಲ್ಲ. ಅವರೊಡನೆ ನಾನೂ ಎಲ್ಲವನ್ನು ಮರೆತು ದೇವರಿಗೆ ಸಾಷ್ಟಾಂಗವೆರಗಿ ಬಿಟ್ಟೆ. ಅಷ್ಟೆ! ಈ ಅಸ್ವಾಮಿಗೆ ಮುದುಕನಿಲ್ಲದೆ ಆ ಸತ್ಪುತ್ರರು ಅಸ್ವಾಮಿ ಮಾಡುತ್ತಾರೆ. ಎಲ್ಲ ಮುಗಿಸಿ ಕಡೆಗೆ ಬರುತ್ತೇನೆಂದು ಹೇಳಿದ್ದೇನೆ," ಎಂದು ಪುಂಡರೀಕ ಪುರೋಹಿತರು ಹೇಳುವವರೆ ಪೂಜೆಗೆ ಪ್ರಾರಂಭಮಾಡಿದರು.

ಪೂಜೆ ಮುಗಿಸಿ ಪ್ರಸಾದ ಕೊಂಡು ದಕ್ಷಿಣೆಪಡೆದು ಹೊರಬರುವಾಗ

ಬಾಗಿಲಲ್ಲಿ ಕೂತ ನಾಯಿಯು ಕೊರಳ ಪಟ್ಟಿಗಿದ್ದ ಗಡಿಯಾರದಲ್ಲಿ ಗಂಟೆ ಹತ್ತೂವರೆ! ಒಂಬತ್ತು ಗಂಟೆಗೆ ಮುಸಾಫರಿ ಕೆರೆಯ ಬಳಿಯಿರಬೇಕಾದ ಭಟ್ಟರು ಕೊರಳು ಗಡಿಯಾರದ ನಾಯಿ ಬಳಿ ಹತ್ತುವರೆಗಿದ್ದರೆ, ಅಲ್ಲಿಂದ ಅವರು ನಡೆಯಬೇಕೆ? ಓಡಬೇಕೆ? ಹಾರಬೇಕೆ?

ಪುಂಡರೀಕನು ಆ ಕತ್ತಲೆಯ ರಾತ್ರಿ, ವಿದ್ಯುಚ್ಛಕ್ತಿಯ ಪ್ರಕಾಶವೂ ಯಾವುದೋ ಕಾರಣದಿಂದ ಮುಗಿದ ರಾತ್ರಿ—ನಕ್ಷತ್ರಗಳ ಮುಸಕುಮುಸಕು ಪ್ರಕಾಶ ಮಾರ್ಗದಲ್ಲೆಲ್ಲ ಹರಡಿದ ರಾತ್ರಿ,ಸಟಸಟನೆ ಆ ಕಡೆ ಈ ಕಡೆ ನೋಡದೆ, ತಲೆಯ ಮೇಲಿನ ಜುಟ್ಟು, ಕೈಯೊಳಗಿನ ತೀರ್ಥಪ್ರಸಾದದ ಚಂಬುಚರಿಗೆ, ಕಂಕುಳಲ್ಲಿರುವ ಬಿಡಿಮಡಿಯ ಕಟ್ಟು, ಎಲ್ಲವನ್ನು ಹಿಡಿದು—ಮಾರ್ಗದ ಮಧ್ಯ ವಾಗಿ–ರಾಜಮಾರ್ಗದ ಮಧ್ಯವಾಗಿ, ಕರಂಗಲಪಾಡಿ ಮುಸಾಫರಿ ಕೆರೆಯನ್ನು ಗುರಿಯಾಗಿಟ್ಟು ನಡೆಯುವಾಗ–ಗಾಳಿಮಳೆ ರಭಸವಾಗಿ ಬೀಸಿದ್ದರೂ ಕೂಡಾ ಗುರಿಯ ಕಡೆಗೆ ಪುಂಡರೀಕನು ನಡೆಕೊಂಡು ಹೋಗುವುದಿರುವಾಗ–ಮಾರ್ಗ ದ ಪಕ್ಕದಿಂದ ಕುಲಗೋತ್ರವಿಲ್ಲದವರಾಗಲಿ ಕುಲಗೋತ್ರವಿದ್ದವರಾಗಲಿ— "ಭಟ್ರೆ ಒಂದು ಉಂಡೆ ತುಂಡು ಕೊಡಿರಿ, ಭಟ್ರೆ, ಒಂದಿಂತಿಷ್ಟು ಪಸಾದ ಕೊಡಿರಿ," ಎಂದರೂ ಆತನು ಅಲ್ಲಿ ನಿಲ್ಲುವ ಪ್ರಸಂಗವಿತ್ತೆ? ಎಷ್ಟು ಮಾತ್ರಕ್ಕೂ ಇರಲಾರದು. ಎಷ್ಟು ಮಾತ್ರಕ್ಕೂ ಪುಂಡರೀಕನು ತನ್ನ ಧರ್ಮಕಾರ್ಯ ವನ್ನು ಬಿಟ್ಟು ಅಲ್ಲದಸಲ್ಲದ ಕುಹಕಗಳಿಗೆ ಕಿವಿಕೊಡಲಾರನು. ಕೊಡಲಾರ ನೆಂದನೆ? ಕೊಡದೇ ಹೋದನಾತನು.

ಸಟಸಟನೆ ನಡೆಯುವ ಪುಂಡರೀಕನಿಗೆದುರು ನಾಲ್ಕೈವರು ಯುವಕರು ಮಾರ್ಗದ ಮಧ್ಯವಾಗಿಯೆ ಬರುವಾಗ, ಮಾರ್ಗವನ್ನು ಬಿಟ್ಟುಕೊಡದ ಈ ಧೂರ್ತ ಹಾರುವ ತಮ್ಮೆದುರು ಬರುತ್ತಿರುವುದನ್ನು ಕಂಡು ಬದಿಗೆ ಸರಿದು ಪುಂಡರೀಕನಿಗೆ ಮಾರ್ಗ ಬಿಟ್ಟರು.

ಸಟಸಟನೆ ನಡೆಯುತ್ತಿರುವ ಪುಂಡರೀಕನ ಎಡಕೈಗೆ ಥಟಕ್ಕೆಂದಿತು ಒಂದು ಪೆಟ್ಟು. ಅದರ ನಂತರ ತಾನೇ ತನ್ನ ಎಡಕೈವರೆಗೆ ಬಂದಿದ್ದ ಬಿಳಿ ಇಜಾರಿನಿಂದ ಆವರಿಸಲ್ಪಟ್ಟಒಂದು ಬಲಗಾಲು ಕೆಳಗಿಳಿದು ನಡೆಯಲಾರಂಭಿ ಸಿದುದು ತೋರಿತು. ಪುಂಡರೀಕನು ಹಿಂದೆ ಸರಿದು ನೋಡುವಾಗ ನಾಲ್ವರು ಯುವಕರು.( ಇಬ್ಬರೊಡನೆ ಸಾಯ್ಕಲು,ಒಬ್ಬನೊಡನೆ ಮೋಟರು ಸಾಯ್ಕಲು,

ಇನ್ನೊಬ್ಬನು ಬರೇ ಕೈಬೀಸುವವನು)—ಪಿಸಿಪಿಸಿ ಮಾತನಾಡುತ್ತ ಮೆಲ್ಲಗೆ ನಡೆಯುತ್ತಿದ್ದರು.

"ಅಹ್ಹ ಹ್ಹ ಹ್ಹ ಹ್ಹ ಹ!" ಎಂದು ಅಟ್ಟಹಾಸವೂ ಹೊಡೆಯಿತು.

"ಏನು? ಏನೆಂದು ಎಣಿಸಿದಿರಿ?''ಎಂದು ತಿರುಗಿಯೆ ಬಿಟ್ಟ ಪುಂಡರೀಕ.

"ಅಹ್ಹ ಹ್ಹ ಹ್ಹ ಹ್ಹ ಹ್ಹ!" ಅಟ್ಟಹಾಸವು ಹೊಡೆಯುತ್ತ ಅದು ಮುಂದಕ್ಕೆ ಸರಿಯಿತು.

"ನಿಲ್ಲಿ! ನಿಲ್ಲುತ್ತೀರಾ, ಇಲ್ಲ? ದಾರೀಹೋಕಳಾಗಿ ಬರುವ ಹೆಣ್ಣೆಂದು ಎಣಿಸಿದಿರಾ? ನಿಲ್ಲಿ!"

ಎಂದು ಪುಂಡರೀಕನು ನಿಂತಲ್ಲಿಂದಲೆ ಉಡಾಯಿಸುವಾಗ, ಯುವಕರ ಗುಂಪು ಮುಂದಕ್ಕೇಸರಿಯಿತು!

ಪುಂಡರೀಕನ ಫಾಲನೇತ್ರವು ಬಿರಿಯಿತು!

ಪುಂಡರೀಕನ ಹೃದಯದ ಝುರಿಯು ಹಾರಿತು.

"ಏನೆಂದು ಎಣಿಸಿದಿರಿ?'' ಎಂದು ಪುಂಡರೀಕನು ಮುಂದೆ ನೆಗೆದಾಗ ಆ ನಾಲ್ವರಾದರೂ ಸಿಳ್ಳುಹಾಕುತ್ತ ಮುಂದಕ್ಕೆ ಬೀಸಿದರು.

ಬೆಂಬತ್ತಿದ ಪುಂಡರೀಕನು ಅವರ ಬಳಿಗೆ ಬರುವಾಗ ಆರು ಮಾರ್ಗಗಳು ಸೇರಿದ ಷಡ್ದರ್ಶನ ಸಂಗ್ರಹದ ಪೋಲಿಸ್ ಜವಾನನು ನಿಂತು ದಾರಿಹೋಕರಿಗೆ ದಾರಿ, ವಾಹನಗಳಿಗೆ ಸೌಕರ್ಯ ಕಲ್ಪಿಸುವ ಸ್ಥಾನವಾಗಿತ್ತು.

"ಏನೆಂದು ಎಣಿಸಿಬಿಟ್ಟಿರಿ ನೀವು?" ಎಂದು ಪುಂಡರೀಕನು ಆರನೆ ಬಾರಿಗೆ ಕೇಳಿದ ಪ್ರಶ್ನೆಗೆ ನಾಲ್ವರು ಯುವಕರು,ಬೆನ್ನು ತಿರುಗಿಸಿ, ಮುಖವನ್ನು ತೋರಿಸಿದರು.

"ಹೀಗೆಂದು ಎಣಿಸಿಬಿಟ್ಟೆವು," ಎಂದವರಲ್ಲೊಬ್ಬನು, ಪುಂಡರೀಕನ ಜುಟ್ಟನ್ನು ಮೇಲಕ್ಕೆಳೆದು ಹಿಡಕೊಂಡುಬಿಟ್ಟನು.

"ಹಿಡ್‌ಕೊಂಡು ಬಿಟ್ಟೆಯಾ, ಜುಟ್ಟು?"

"ಅಹ್ಹಹ್ಹಹ! ಕಾಣ್ಬುದಿಲ್ಲವೆ? ಕೊಂಕಣಿ ಬಿರಾಣಿ! ಬೀ–ರಾಣಿ!" ಎಂದು ನೀಲ ಬಣ್ಣದ ಶರ್ಟನ್ನು ಹಾಕಿದ ಟೊಣಪನು ಅಕ್ಷರಗಳನ್ನು ಸಡಿಲವಾಗಿ ಉಚ್ಚರಿಸಿದನು.

ತಲೆಯನ್ನೂ ಜುಟ್ಟನ್ನೂ ತಪ್ಪಿಸಿದ ಪುಂಡರೀಕನು ಸರಕ್ಕನೆ ಬದಿಗೆ ತಿರುಗಿ,

"ಪರಿಚಯುವಿದೆಯೆ ನನ್ನದು. ಯಾರೆಂದು ಎಣಿಸಿಸಿದಿರಿ ನೀವು?" ಎಂದು ಬಿಳಿ ಚಲ್ಲಣ ತೊಟ್ಟುಸಾಯ್ಕಲನ್ನು ಹಿಡಿದುನಿಂತು, ಉಂಗುರು ಕೂದಲಿನಿಂದ, ಬೋಳು ಮೀಸೆಯಿಂದ, ಕಪ್ಪಗಿನ ಸಿಡುಬಿನ ಗುರುತುಗಳಿಂದ ಚಿರಪರಿಚಿತನಾದ ವ್ಯಕ್ತಿಗೆ ಪುಂಡರೀಕನು ಕೇಳಿದನು. ವ್ಯಕ್ತಿ ತನ್ನೆರಡು ಕೈಗಳನ್ನೂ ಸಾಯ್ಕಲಿನ ಮೃದು ಪೀಟಕ್ಕೆ ಕೊಟ್ಟು ಅವುಗಳ ಮೇಲೆ ತನ್ನ ಮುಖಕಮಲವನ್ನು ಇಟ್ಟುಕೊಳ್ಳಬೇಕೇ ಆಗ?

"ಮುಖಕಮಲದಿಂದ ಮಧುರಸದ ವಾಸನೆ, ಹೊರಬಹುದೆಂದು ನಿನ್ನನು ದೂಷಿಸಲಾರೆ, ಬಾಯ್ದೆರೆಯು—ಹೇಳು, ನನ್ನ ಪರಿಚಯುವಿದೆಯೆ?"

ವ್ಯಕ್ತಿ ನಿರುತ್ತರ! ಉಳಿದ ವ್ಯಕ್ತಿಗಳು, ತಟಸ್ಥರಾದರು.

"ಮಾತನಾಡುವಾಗ ಅಕ್ಷರಗಳು ತಪ್ಪಾಗಬಹುದೆಂದು ತಿಳಿಯಲಾರೆ, ತಿಳಿಸು, ನನ್ನ ಪರಿಚಯುವಿದೆಯೆ?"

ವ್ಯಕ್ತಿ ನಿರುತ್ತರ!! ನೀಲ ಬಣ್ಣದ ಶರ್ಟಿನ ಟೊಣಪನು ತಾನು ನೂಕಿ ಬರುವ ಮೋಟರು ಸಾಯ್ಕಲನ್ನು ಒಡನೆಯೇ ಮುಂದಕ್ಕೆ ನೂಕಿ ಪುಂಡರೀಕನ ಬೆನ್ನಿಗೆ ಏರಿಸಿಬಿಟ್ಟನು. ಬದಿಯಲ್ಲಿ ನಿಂತ ಬಿಳಿಯ ಶರ್ಟನ್ನು ತೊಟ್ಟುಕೊಂಡ ಆ ಉದ್ದ ಮೂಗಿನ ಗರುಡನೊಬ್ಬ ತನ್ನ ಕೈಯಲ್ಲಿನ ಸಾಯ್ಕಲನ್ನು ನೂಕಿ, ಆದರ ಉರಿಯುವ ದೀಪವನ್ನು ಪುಂಡರೀಕನ ಬಲಗೈಗೆ ಘರ್ಷಣೆ ಮಾಡಿ ಉರಿಯುವಂತೆ ಮಾಡಿದನು.

ತಿರಿಗೊಮ್ಮೆ ಪುಂಡರೀಕನ ಪ್ರಶ್ನೆ!

"ಪರಿಚಯುವಿದೆಯೆ ನನ್ನದು? ಇಲ್ಲವಾದರೆ, ನಾಳೆ ಬೆಳಿಗ್ಯೆ ಸೂರ್ಯೋದಯುವಾದ ಮರುಕ್ಷಣಕ್ಕೆ ನನ್ನ ಪರಿಚಯುವನ್ನು ನಿನ್ನ ಮನೆಯ ಬಾಗಲಲ್ಲಿ ಮಾಡಿಕೊಡುವೆನು. ನೀನು ಕುಡಿದಂತಹ ಯಾವ ತೀರ್ಥೋದಕವಿದೆ, ಆ ತೀರ್ಥೋದಕಕ್ಕೆ ದನದ ಸೆಗಣಿ, ದನದ ಮೂತ್ರ, ದನದ ಹಾಲು, ದನದ ಮೊಸರು ದನದ ತುಪ್ಪ ಎಲ್ಲವನ್ನು ಸೇರಿಸಿ ಪಂಚಗವ್ಯ ಮಾಡಿ ನಿನ್ನ ಈ ಕಾಲಿನ ಬೂಟ್ಸಿನ ಸೌದು ಮಾಡಿ ನಿನ್ನ ಮೂಗಿನ ಎರಡು ಸೊಳ್ಳೆಗಳಿಂದ ಪ್ರಾಶನ ಮಾಡಿಸಿ ನಿನ್ನನ್ನು ಪವಿತ್ರ ಮಾಡದಿದ್ದರೆ!........ನನ್ನ ಪರಿಚಯುವಿದೆಯೆ?" ಎಂದು ಪುಂಡರೀಕನು ಕೇಳುವಾಗ ವ್ಯಕ್ತಿ ನಿರುತ್ತರನು! ಕೈಗಳಿಗೆ ಮುಖ ಕೊಟ್ಟು ನಿಂತ ವ್ಯಕ್ತಿ ತುಟಿಯೆರಡು ಮಾಡಲಾರದಾದನು.

"ಮಂಗಳೂರಿನ ಆಢ್ಯ ಪುರುಷನಾಗಿ, ಮಂಗಳೂರಿನ ಆಢ್ಯ ಪುರುಷನ ಪುತ್ರನಾಗಿ, ಕುಲದೀಪನಾಗುವುದರ ಬದಲಿಗೆ, ಹೇಳು, ಕುಲಕ್ಕೆ ದೀಪವನ್ನು

ಇಟ್ಟು ಬಿಟ್ಟೆಯಾ? ಪರಿಚಯುವಿದೆಯೆ ನನ್ನದು? ನಾಳೆಯ ಪ್ರಾತಃಕಾಲಕ್ಕೆ ನನ್ನ ಪರಿಚಯುವನ್ನು ಮಾಡಿಕೊಡುವೆನು!"

ಎಂದು ಪುಂಡರೀಕನು ನಿರುತ್ತರನಾದವನನ್ನು ಬಿಟ್ಟು ಬಲಕ್ಕೆ ತಿರುಗಿದನು.

"ಅಲಲಲಲಲಲಾ, ಹೇನು ಧೈರ್ಯ! Bloody fool! Rascal" ಎಂದು ನೀಲಿ ಬಣ್ಣದವನು ಸಾಯ್ಕಲನ್ನು ಮುಂದಕ್ಕೆ ನೂಕಲು ಬೆನ್ನು ಬಗ್ಗಿಸಿದನು.

"Bloody Fool! Rascal" ಎಂದು ಉದ್ದ ಮೂಗಿನ ಗರುಡನೂ ಬೊಬ್ಬಿಟ್ಟನು.

"Bloody Fool, Rascal ಅಂದೆಯಾ! Bloody Fool!! Bloody Fool!! Have you ever shed blood? Have you bled any time of your life? Come on, I'll bleed and blood I'll shed. Come on! Let's try."

ಪುಂಡರೀಕನು ಮಂಗಳೂರಿನಿಂದ ಲಂಡನ್ ಪಟ್ಟಣಕ್ಕೆ ಹನುಮಂತನ ಹಾಗೆ ಹಾರುವಾಗ, ಎದುರಿನ ಬಿಳಿ ಶರ್ಟಿನ ಗರುಡನು ಸಿಂಹಿಕೆಯು ಹಾಗೆ ಬೆಳೆದು ಬಂದು ತನ್ನ ಬಲಗಾಲಿನಿಂದ ಒದೆದ ಪೆಟ್ಟಿಗೆ ಪುಂಡರೀಕನ ಕೈಯೊಳಗಿದ್ದ ತೀರ್ಥೋದಕದ ಕಲಶವು ಹಾರಿ ಅದರೊಳಗಿನ ತೀರ್ಥವೆಲ್ಲ ಚಿಮುಕಿಸಲ್ಪಟ್ಟು, ಅಲ್ಲಿ ನಿಂತವರೆಲ್ಲ—ಯಾವ ಜಾತಿಯೋ ಯಾವ ಧರ್ಮವೊ—ಪವಿತ್ರರಾದವರಾದರು.

ತುಟಿ ಎರಡು ಮಾಡದ ವ್ಯಕ್ತಿ, ಸಾಯ್ಕಲಿನ ಪೀಠಕ್ಕೆ ಕೊಟ್ಟ ಕೈಗಳಲ್ಲಿ ಮುಖ ಇಟ್ಟು ನಿಂತವನು, ನಿಂತೇ ಬಿಟ್ಟನು!

ಅಷ್ಟರೊಳಗೆ, ಆ ಮಾರ್ಗವಾಗಿ ಹಾದು ಹೋಗುವ ರೋಮೀಯ ಕ್ರೈಸ್ತನು ಒಂದು ನಿಮಿಷ ನಿಂತು ನೋಡಿದವನು, "ಭಟ್ಟ, ಮನೆಗೆ ಹೋಗು, ನಾಳೆ ನೋಡುವ," ಎಂದು ಕಲಶವನ್ನು ಹೆಕ್ಕಿ ತೆಗೆದು ಪುಂಡರೀಕನ ಕೈಯಲ್ಲಿ ಕೊಟ್ಟು ಬೆನ್ನಿನ ಮೇಲೆ ಕೈಯಾಡಿಸಿ ಮುಂದಕ್ಕೆ ಕಳಿಸಿಬಿಟ್ಟನು.

"ನಾಳೆ ಬೆಳಿಗ್ಗೆ ಪರಿಚಯ ಮಾಡಿಸುವೆನು"! ಎಂದು ಪುಂಡರೀಕನು ಹೇಳಿದಾಗ, ಗುಂಪಿನ ಮೂವರು ಹೊಡೆದ ಜಯಭೇರಿ, ತುಟಿಯೆರಡು

ಮಾಡದೆ ಸಾಯ್ಕಲಿನ ಮೇಲೆ ಹೊರೆ ಕೊಟ್ಟು ನಿಂತು ವ್ಯಕ್ತಿಯ ಎರಡು ಕಿವಿಗಳನ್ನು ಕಿವುಡು ಮಾಡಿ ಬಿಟ್ಟಿತು.

ಕರಂಗಲಪಾಡಿಗೆ ಹೋಗುವ ಪುಂಡರೀಕನು ಕರಂಗಲ ಪಾಡಿಗೆ ನಡೆದು ಕೊಂಡನು.

ಪುಂಡರೀಕನು ಘಳ್ನೀರಿನಿಂದ ಹಂಪನಕಟ್ಟೆಗೆ ಹೋಗುವ ಮಾರ್ಗವನ್ನು ಮುಟ್ಟಿದ್ದಾನೆ, ಇಲ್ಲ, ಹಿಂದಿನಿಂದ ಬಂದಿತು ಸಾಯ್ಕಲ್ ಸವಾರಿ ದಪ್ಪಗಿನ ಗಾಳಿಯನ್ನು ಸೀಳಿ 'ರುಂಯ್ ರುಂಯ್ ರುಂಯ್' ಎಂದು ಬರುವ ಸವಾರಿ—ಕೇವಲ ಸವಾರಿ!

'ರುಂಯ್' ಎಂದು ಬರುವ ಸ್ಯಾಕಲ್ ಸವಾರಿಯನ್ನು ಹಿಂದಕ್ಕೆ ತಿರುಗಿ ನೋಡಲು ಪುಂಡರೀಕನ ಮನಸ್ಸು ನಿರಾಕರಿಸಿತು.

'ರುಂಯ್' ಎಂದು ಬಂದ ಸ್ಯಾಯ್ಕಲ್ ಸವಾರಿ ಕೆಳಗಿಳಿದಾಗ, ಆಡಿನ ಮರಿಯು ಹಾಯ್ದು ಬರುವ ನಾಯಿಗೆ ತನ್ನ ಚಿಕ್ಕ ಕೋಡುಗಳನ್ನು ಕೊಟ್ಟು ನಿಂತಂತೆ ಪುಂಡರೀಕನು ತಿರುಗಿಬಿಟ್ಟನು. ತುಟಿಯೆರಡು ಮಾಡದೆ ಸಾಯ್ಕಲಿನ ಪೀಠಕ್ಕೆ ಕೊಟ್ಟ ಕೈಗಳರಡರಲ್ಲಿ ಮುಖಾರವಿಂದವನ್ನಿಟ್ಟು ನಿಂತ ವ್ಯಕ್ತಿ ಸಾಯ್ಕಲನ್ನು ಮೆಲ್ಲಗೆ ಮಾರ್ಗದ ಮೇಲೆ ಮಲಗಿಸಿದನು.

"ಸರ್ವಾಪರಾಧವನ್ನು ಕ್ಷಮಿಸಬೇಕು. ದುರ್ವ್ಯಸನಕ್ಕೆ ಬಲಿಯಾಗಿ, ಯಾವ ಅಪರಾಧವನ್ನು ಮಾಡಿದ್ದೇನೆ ಅದನ್ನು ಕ್ಷಮಿಸಬೇಕು; ನನ್ನನ್ನು ಮರೆಯಬೇಕು. ನಿಮ್ಮ ಕಾಲು ಹಿಡಿಯುವೆನು," ಎಂದು ರುಂಯನೆ ಬಂದ ಸಾಯ್ಕಲ್ ಸವಾರಿ ಭೂಮಿ ಮುಟ್ಟಿ ಸಾಷ್ಟಾಂಗವೆರಗಿತು.

ಅತ್ಯುನ್ನತವಾದ ಗಿರಿಯ ಮೇಲೆ ನಿಂತ ಏಕತಾಳದಂತಿರುವ ಪುಂಡರೀಕನು, "ಎಲ್ಲಿ ಮನ ಕಳುಕಿರದು ಎಲ್ಲಿ ತಲೆ ಬಾಗಿರದು" ಎಂಬ ಸ್ವರ್ಗದಲ್ಲಿ ನಿಂತುಕೊಂಡು,

"ನಿಂತುಕೋ, ಎದ್ದು ಕೋ, ನಿನ್ನ ಮರೆತಿರುವೆನು, ನಿನ್ನ ತಪ್ಪನ್ನು ಕ್ಷಮಿಸಿರುವೆನು, ಆದರೆ ನನ್ನ ಈ ಅನುಭವವನ್ನು ಯಾವಾಗಲೂ ನೆನೆಯುವೆನು," ಎಂದು ಗಂಭೀರ ಸ್ವರದಲ್ಲಿ ಹೇಳಿದನು.

"ನೆನೆಯಬಹುದು, ಯಾವಂದು ಈ ಅಲ್ಪಮತಿಯ ಕಾಯಕ್ಕೆ ಸಾಧ್ಯವಾಗಬಹುದು, ಅಂದು ಈ ಅಲ್ಪಮತಿಯೂ ನೆನೆಯುವನು," ಎಂದು

ಪುಂಡರೀಕನ ಕೈಯ ಸಹಾಯದಿಂದ ಮೇಲೆದ್ದ ಸಾಯ್ಕಲ್ ಸವಾರಿ ಅಂದಿತು.

ಎಲ್ಲಿಂದಲೋ ಎಂಬಂತೆ ಉಡುಗಿಹೋದ ವಿದ್ಯುಚ್ಛಕ್ತಿಯ ಪ್ರವಾಹ ಕಂಬದ ಬುರುಡೆಗಳಲ್ಲಿ ತುಂಬಿತು. ಪುಂಡರೀಕನ ಮೈ ಮೇಲೆ ತೋರು ವಂತಹ ಕೆಂಪು ಮಣ್ಣಿನ ಗುರುತುಗಳು ಪ್ರಜ್ವಲಿಸಿದುವು.

ಮೈ ಮೇಲೆ ನಿಂತಂತಹ ಒದ್ದೆಯಾಂತ ವಸ್ತ್ರವು ಝಗಝಗಿಸಿತು. ಮೋಟರು ಸಾಯ್ಕಲಿನ ನಡೆಗೆ ದಾರಿ ಕೊಟ್ಟಂತಹ ಅವನ ಬೆನ್ನು ಸಾಯ್ಕಲಿನ ದೀಪಕ್ಕೆ ಘರ್ಷಿಸಿ ಉರಿಯುವ ಕೈಗಳಲ್ಲಿ ದೇವರ ಬುಟ್ಟಿ ತೂಗಿಕೊಂಡಿತು.

ಕರಂಗಲಪಾಡಿಯ ಸತ್ರಾಳಿ ವೈಕುಂಠ ಹೆಗ್ಡೆಯವರ ಮನೆ ಬಾಗಲಿಗೆ ಮುಟ್ಟುವಾಗ ಒಳಗಿಂದ ತೊಟ್ಟಿಲು ತೂಗುವ ಸ್ವರದೊಡನೆ ಯಾರೋ ಹೆಣ್ಮಗು ಹಾಡುವುದೂ ಕೇಳಿತು;

"ಆರತಿ ಯೆತ್ತಿರೆ, ವಾರಿಜ ಮುಖಿ ಸೀತಾ ದೇವಿಗೆ!
ಮೂರು ಲೋಕವ ನಾಳ್ವ ಶ್ರೀ ರಾಮ ಚಂದ್ರಗೆ !
ಶ್ರೀ ರಾಮ ಚಂದ್ರಗೆ........"

—: ಸಂಪೂರ್ಣ :—

ಶ್ರೀ ನಾರಾಯಣ ಗುರು ಪ್ರೆಸ್, ಮಂಗಳೂರು